ಕನ್ನಡ ವಿಶ್ವವಿದ್ಯಾಲಯ
ಹಂಪಿ



# ಕಾ.ತ. ಚಿಕ್ಕಣ್ಣನವರ ಕಥೆಗಳಲ್ಲಿನ ಸ್ತ್ರೀಪಾತ್ರ ಚಿತ್ರಣ

(ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ)

ಸಂಶೋಧನಾ ವಿದ್ಯಾರ್ಥಿನಿ

ಪ್ರಿಯದರ್ಶಿನಿ ಎಂ.

**ನೋಂದಣಿ ಸಂಖ್ಯೆ : KVMBKS00431**

ಮಾರ್ಗದರ್ಶಕರು

ಡಾ. ಡಿ. ಮಂಗಳಾ ಪ್ರಿಯದರ್ಶಿನಿ, ಎಂ.ಎ., ಎಂ.ಫಿಲ್., ಪಿ.ಎಚ್‌ಡಿ.
ಪ್ರಾಂಶುಪಾಲರು
ವಿ.ವಿ.ಎಸ್.ಪ್ರಥಮ ದರ್ಜೆ ಮಹಿಳಾ ಕಾಲೇಜು, ಬಸವೇಶ್ವರನಗರ,
ಬೆಂಗಳೂರು - ೫೬೦೦೭೯.

ಕಾವ್ಯಮಂಡಲ

ನಂ. ೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ
ಬಸವನ ಗುಡಿ, ಬೆಂಗಳೂರು-೫೬೦೦೦೪

೨೦೧೦

ಕನ್ನಡ ವಿಶ್ವವಿದ್ಯಾಲಯ
ಹಂಪಿ




# ಕಾ.ತ. ಚಿಕ್ಕಣ್ಣನವರ ಕಥೆಗಳಲ್ಲಿನ ಸ್ತ್ರೀಪಾತ್ರ ಚಿತ್ರಣ

(ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ)

ಸಂಶೋಧನಾ ವಿದ್ಯಾರ್ಥಿನಿ

ಪ್ರಿಯದರ್ಶಿನಿ ಎಂ.

ನೋಂದಣಿ ಸಂಖ್ಯೆ : **KVMBKS00431**

ಮಾರ್ಗದರ್ಶಕರು

ಡಾ. ಡಿ. ಮಂಗಳಾ ಪ್ರಿಯದರ್ಶಿನಿ, ಎಂ.ಎ., ಎಂ.ಫಿಲ್., ಪಿ.ಎಚ್‌ಡಿ.
ಪ್ರಾಂಶುಪಾಲರು
ವಿ.ವಿ.ಎಸ್.ಪ್ರಥಮ ದರ್ಜೆ ಮಹಿಳಾ ಕಾಲೇಜು, ಬಸವೇಶ್ವರನಗರ,
ಬೆಂಗಳೂರು – ೫೬೦೦೭೯.

ಕಾವ್ಯಮಂಡಲ

ನಂ. ೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ

ಬಸವನ ಗುಡಿ, ಬೆಂಗಳೂರು–೫೬೦೦೦೪

೨೦೧೦

# ದೃಢೀಕರಣ ಪತ್ರ

ಪ್ರಿಯದರ್ಶಿನಿ ಎಂ. ರವರು ಎಂ.ಫಿಲ್ ಪದವಿಗಾಗಿ ಬರೆದು ಸಿದ್ಧಪಡಿಸಿರುವ **"ಕಾ.ತ. ಚಿಕ್ಕಣ್ಣನವರ ಕಥೆಗಳಲ್ಲಿನ ಸ್ತ್ರೀಪಾತ್ರ ಚಿತ್ರಣ"** ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

D. ಮಂಗಳ

ಪ್ರಾಂಶುಪಾಲರು
ವಿದ್ಯಾ ವರ್ಧಕ ಸಂಘ
ಮಹಿಳಾ ಪ್ರಥಮ ದರ್ಜೆ ಕಾಲೇಜು
ಬಸವೇಶ್ವರನಗರ, ಬೆಂಗಳೂರು-560 079

ಮಾರ್ಗದರ್ಶಕರು
ಡಾ. ಡಿ. ಮಂಗಳಾ ಪ್ರಿಯದರ್ಶಿನಿ, ಎಂ.ಎ., ಎಂ.ಫಿಲ್., ಪಿ.ಎಚ್‌ಡಿ.
ಪ್ರಾಂಶುಪಾಲರು
ವಿ.ವಿ.ಎಸ್.ಪ್ರಥಮ ದರ್ಜೆ ಮಹಿಳಾ ಕಾಲೇಜು, ಬಸವೇಶ್ವರನಗರ,
ಬೆಂಗಳೂರು – 560079.

ಸ್ಥಳ : ಬೆಂಗಳೂರು

ದಿನಾಂಕ : 15/09/2010

# ಪ್ರಮಾಣ ಪತ್ರ

**"ಕಾ.ತ. ಚಿಕ್ಕಣ್ಣನವರ ಕಥೆಗಳಲ್ಲಿನ ಸ್ತ್ರೀ ಪಾತ್ರ ಚಿತ್ರಣ"** ಎಂಬ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು ಡಾ. ಡಿ. ಮಂಗಳಾ ಪ್ರಿಯದರ್ಶಿನಿರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧದ ವಿಷಯವಾಗಿ ಇದುವರೆಗೂ ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

(ಪ್ರಿಯದರ್ಶಿನಿ ಎಂ.)

ಸಂಶೋಧನಾ ವಿದ್ಯಾರ್ಥಿನಿ

ಸ್ಥಳ : ಬೆಂಗಳೂರು

ದಿನಾಂಕ : 15/09/2010

# ಒಡಲೊಳಗೆ




| ಕ್ರ ಸಂ. | ಅಧ್ಯಾಯಗಳು | ಪುಟ ಸಂಖ್ಯೆ |
|---|---|---|
| ೧. | **ಅಧ್ಯಾಯ – ೧** ಅಧ್ಯಯನದ ವ್ಯಾಪ್ತಿ ಮತ್ತು ಉದ್ದೇಶ | ೧–೧೭ |
| ೨. | **ಅಧ್ಯಾಯ – ೨** ಪ್ರಕೃತಿ–ಸಂಸ್ಕೃತಿ ಮತ್ತು ಮಹಿಳೆ | ೧೮–೩೨ |
| ೩. | **ಅಧ್ಯಾಯ – ೩** ಪುರುಷಾಧಿಕಾರದ ಅನಾವರಣ | ೩೩–೫೭ |
| ೪. | **ಅಧ್ಯಾಯ – ೪** ಸಂಜೆಗತ್ತಲಿನ ಮಿಣುಕು ದೀಪಗಳು | ೫೮–೬೪ |
| ೫. | **ಅಧ್ಯಾಯ – ೫** ಚಿಕ್ಕಣ್ಣನವರ ಕಲಾತ್ಮಕತೆ | ೬೫–೬೯ |
| ೬. | **ಅಧ್ಯಾಯ – ೬** ಸಮಾರೋಪ | ೭೦–೮೧ |

# ಅಧ್ಯಾಯ – ೧

## ಅಧ್ಯಯನದ ವ್ಯಾಪ್ತಿ ಮತ್ತು ಉದ್ದೇಶ

**ಹೆಣ್ಣು –**

**ಭೂಮಿ.**

**ಪ್ರಕೃತಿ.**

**ಮಾತು–ಮೌನ.**

**ಗುಡುಗು–ಮಿಂಚು.**

**ಅಷ್ಟೇ ಅಲ್ಲ,**

**ಆನಂದ, ಆತಂಕಗಳ ಆಗರ.**

**ದೇವಿ–ಮಾರಮ್ಮರ ಸಾಕಾರ.**

**ಶಾಂತಿ–ಸೌಂದರ್ಯಗಳ ರೂಪ.**

***'ದಂಡೆ' – ಕಾ. ತ. ಚಿಕ್ಕಣ್ಣ.***

ಕಾ.ತ.ಚಿಕ್ಕಣ್ಣನವರ 'ದಂಡೆ' ಕಾದಂಬರಿಯಲ್ಲಿ ಬರುವ ಈ ಮೇಲಿನ ಸಾಲುಗಳಲ್ಲಿ ಹೆಣ್ಣನ್ನು ವ್ಯಾಖ್ಯಾನಿಸಿರುವುದು ಬಹಳ ಅರ್ಥಪೂರ್ಣವಾಗಿದೆ. **'ಹೆಣ್ಣು–ಭೂಮಿ. ಪ್ರಕೃತಿ'**. ಭೂಮಿತಾಯಿಯಷ್ಟು ತಾಳ್ಮೆ, ಕರುಣೆ, ಪ್ರೀತಿ, ಪ್ರಕೃತಿಯಂತೆ ಎಲ್ಲವನ್ನೂ ಅನುಕೂಲಕ್ಕೆಂದೇ ಒದಗಿಸುತ್ತಾ, ಜೀವಕ್ಕೆ ಉಸಿರಾಗುವವಳು, ಜೊತೆಗೆ ಎಲ್ಲೆ ಮೀರಿದರೆ ಪ್ರಳಯ – ಭೂಕಂಪನಗಳಂತೆ, ಪ್ರವಾಹದಂತೆ–ನಾಶಮಾಡುವವಳೂ ಹೌದು.

**'ಹೆಣ್ಣು ಮಾತು–ಮೌನ'**–ಕಲಿಕೆಯ ಗುರು, ಮೌನದಲ್ಲಿ ಪುಟವಿಟ್ಟ ಬಂಗಾರ, **'ಹೆಣ್ಣು ಗುಡುಗು'**– ಮಾತಿನಿಂದ ಎಲ್ಲರನ್ನೂ ನಡುಗಿಸುವ, ಎಲ್ಲರನ್ನೂ ತನ್ನ ಮುಷ್ಠಿಯಲ್ಲಿಟ್ಟುಕೊಳ್ಳುವ ಶಕ್ತಿಯ ಪ್ರತಿರೂಪ. **'ಹೆಣ್ಣು ಮಿಂಚು'** ಬಾಳಿನ ಬೆಳಕು, ಮನೆಯ ಜ್ಯೋತಿ–ಮುನಿದರೆ ಜ್ವಾಲಾಮುಖಿ. **'ಹೆಣ್ಣು ಆನಂದ–ಆತಂಕಗಳ ಆಗರ'**. ದಿನದ ಚಟುವಟಿಕೆಗಳಲ್ಲಿ ಅವಳು ವಹಿಸುವ ಪಾತ್ರ ಗಣನೀಯವಾದುದು. ಅಂತಹ ಉತ್ಸಾಹದ ಚಿಲುಮೆ ಇಲ್ಲದೇ ಹೋದರೆ ಆಕಾಶವೇ ತಲೆಕೆಳಗಾಗಿದೆಯೇನೋ ಎಂಬ ಆತಂಕ ಎಲ್ಲರನ್ನು ಆವರಿಸುತ್ತದೆ. **'ಹೆಣ್ಣು ದೇವಿ–ಮಾರಮ್ಮರ'** ಸಾಕಾರ–ಒಲಿದರೆ ನಾರಿ ಮುನಿದರೆ ಮಾರಿ ಎನ್ನುವಂತೆ ಒಲಿದರೆ ಸಾಕ್ಷಾತ್ ದೇವತೆ, ಮುನಿದರೆ

ಬಲಿಬೇಡುವ ಮಾರಮ್ಮ, **'ಹೆಣ್ಣು ಶಾಂತಿ-ಸೌಂದರ್ಯಗಳ ರೂಪ'**-ಪ್ರಕೃತಿಯ ಶಾಂತಿ ಮತ್ತು ಸೌಂದರ್ಯ (ಸೌಂದರ್ಯವೆಂದರೆ ಆತ್ಮ ಸೌಂದರ್ಯವೂ ಹೌದು) ಎಲ್ಲವನ್ನು ತನ್ನಲ್ಲೇ ಹೊಂದಿರುವ ರೂಪವತಿ.

ಇಂತಹ ಎಲ್ಲ ಅನುಭವವನ್ನು ಕಟ್ಟಿಕೊಡುತ್ತದೆ ಕಾ.ತ. ಚಿಕ್ಕಣ್ಣನವರ 'ದಂಡೆ' ಕಾದಂಬರಿ. ಈ ಕಾದಂಬರಿಯನ್ನು ಓದುತ್ತಾ ಹೋದಂತೆ ಅದರಲ್ಲಿ ಕಂಡುಬರುವ ಸ್ತ್ರೀಪಾತ್ರಗಳ ವೈವಿಧ್ಯತೆ, ಜೀವನದ ಸಹಜತೆ ಪ್ರಸ್ತುತ ಪ್ರಬಂಧ "ಕಾ.ತ. ಚಿಕ್ಕಣ್ಣನವರ ಕಥೆಗಳಲ್ಲಿನ ಸ್ತ್ರೀಪಾತ್ರ ಚಿತ್ರಣ" ಎಂಬ ಅಧ್ಯಯನವನ್ನು ಕೈಗೊಳಲು ಪ್ರೇರೇಪಿಸಿತು.

ಪ್ರಸ್ತುತ ಪ್ರಬಂಧಕ್ಕೆ ಕಥೆಗಳನ್ನೇ ಆಯ್ಕೆ ಮಾಡಿಕೊಂಡಿರುವುದರಿಂದ ಕಥೆಗಳನ್ನು ಕುರಿತು ಪಕ್ಷಿನೋಟ ತಿಳಿಸಲು ಪ್ರಯತ್ನಿಸಲಾಗಿದೆ.

ಭಾರತೀಯ ಸಂಸ್ಕೃತಿಯಲ್ಲಿ ಪ್ರಾಚೀನ ಕಾಲದಿಂದಲೂ ಕಥನ ಸಾಹಿತ್ಯಕ್ಕೆ ಬೇರೆಯದೇ ಆದ, ಕಾಣದ ಪ್ರಾಶಸ್ತ್ಯ ದೊರೆತಿದೆ. ಹಾಗೂ ಇಲ್ಲಿ ದೊರೆತಿರುವಷ್ಟು ಕಥನ ಸಾಹಿತ್ಯದ ಪ್ರಕಾರಗಳು ಬೇರೆಲ್ಲಿಯೂ ಇಲ್ಲ ಎಂದರೆ ಅತಿಶಯೋಕ್ತಿಯಲ್ಲ.

ಕನ್ನಡ ಸಾಹಿತ್ಯದಲ್ಲಿ 'ಕಥೆ' ಎನ್ನುವಂತಹ ಕಲ್ಪನೆ ಇಂದು ನೆನ್ನೆಯದಲ್ಲ. ಗುಣಾಢ್ಯನ 'ಬೃಹತ್ ಕಥೆ'ಯ ಪ್ರಭಾವದ ದುರ್ಗಸಿಂಹನ ಪಂಚತಂತ್ರ, ಕನ್ನಡದ ಮೊಟ್ಟ ಮೊದಲ ಗದ್ಯ ಕೃತಿ 'ವಡ್ಡಾರಾಧನೆ'ಯ ಕಾಲದಲ್ಲಿಯೇ ಕಥೆ ಹೆಚ್ಚು ಮನ್ನಣೆಯನ್ನು ಪಡೆದಿರುವುದನ್ನು ಗಮನಿಸಬಹುದು. ಅಷ್ಟೇ ಅಲ್ಲದೆ, ಇವುಗಳಿಗಿಂತಲೂ ಹಿಂದೆಯೇ ಮೌಖಿಕ ಪರಂಪರೆಯೊಂದು ತನ್ನ ವಿಶಿಷ್ಟ ಕಥನ ಸಂಸ್ಕೃತಿಯನ್ನು ಸೊಗಸಾಗಿ ಬೆಳೆಸಿತ್ತು ಎನ್ನಬಹುದು. ಉದಾಹರಣೆಗೆ ಜಗತ್ತಿನ ಎಲ್ಲ ಭಾಗದಲ್ಲಿಯೂ ಸಿಗುವ ಜನಪದ ಕಥೆಗಳು.

ಇನ್ನು ನಮ್ಮ ಮಹಾ ಪುರಾಣಗಳಾದ ರಾಮಾಯಣ, ಮಹಾಭಾರತಗಳು, ವೇದ ಉಪನಿಷತ್ತಿನಲ್ಲಿಯೂ ಅನೇಕ ಕತೆಗಳು ಬರುತ್ತವೆ; ಪಂಚತಂತ್ರ-ಹಿತೋಪದೇಶ, ನೀತಿಕತೆಗಳು ಹೀಗೆ 'ಕಥಾಪ್ರಕಾರ' ವಿಶಾಲ ಹಿನ್ನೆಲೆಯನ್ನು ಹೊಂದಿದೆ. ಜನಪದ ನೆಲೆಯಲ್ಲಂತೂ 'ಕಥೆ' ಹೇಳುವ ಕಲೆ ಹಿಂದಿನಿಂದಲೂ ನಡೆದು ಬಂದು ಇಂದಿಗೂ ಸಹ ತನ್ನ ಶ್ರೇಷ್ಠತೆಯನ್ನು ಉಳಿಸಿಕೊಂಡಿದೆ.

# ಅಧ್ಯಾಯ – ೧

## ಅಧ್ಯಯನದ ವ್ಯಾಪ್ತಿ ಮತ್ತು ಉದ್ದೇಶ

**ಹೆಣ್ಣು –**

**ಭೂಮಿ.**

**ಪ್ರಕೃತಿ.**

**ಮಾತು–ಮೌನ.**

**ಗುಡುಗು–ಮಿಂಚು.**

**ಅಷ್ಟೇ ಅಲ್ಲ,**

**ಆನಂದ, ಆತಂಕಗಳ ಆಗರ.**

**ದೇವಿ–ಮಾರಮ್ಮರ ಸಾಕಾರ.**

**ಶಾಂತಿ–ಸೌಂದರ್ಯಗಳ ರೂಪ.**

***'ದಂಡೆ' – ಕಾ. ತ. ಚಿಕ್ಕಣ್ಣ.***

ಕಾ.ತ.ಚಿಕ್ಕಣ್ಣನವರ 'ದಂಡೆ' ಕಾದಂಬರಿಯಲ್ಲಿ ಬರುವ ಈ ಮೇಲಿನ ಸಾಲುಗಳಲ್ಲಿ ಹೆಣ್ಣನ್ನು ವ್ಯಾಖ್ಯಾನಿಸಿರುವುದು ಬಹಳ ಅರ್ಥಪೂರ್ಣವಾಗಿದೆ. **'ಹೆಣ್ಣು–ಭೂಮಿ. ಪ್ರಕೃತಿ'.** ಭೂಮಿತಾಯಿಯಷ್ಟು ತಾಳ್ಮೆ, ಕರುಣೆ, ಪ್ರೀತಿ, ಪ್ರಕೃತಿಯಂತೆ ಎಲ್ಲವನ್ನೂ ಅನುಕೂಲಕ್ಕೆಂದೇ ಒದಗಿಸುತ್ತಾ, ಜೀವಕ್ಕೆ ಉಸಿರಾಗುವವಳು, ಜೊತೆಗೆ ಎಲ್ಲೆ ಮೀರಿದರೆ ಪ್ರಳಯ – ಭೂಕಂಪನಗಳಂತೆ, ಪ್ರವಾಹದಂತೆ–ನಾಶಮಾಡುವವಳೂ ಹೌದು.

**'ಹೆಣ್ಣು ಮಾತು–ಮೌನ'**–ಕಲಿಕೆಯ ಗುರು, ಮೌನದಲ್ಲಿ ಪುಟವಿಟ್ಟ ಬಂಗಾರ, **'ಹೆಣ್ಣು ಗುಡುಗು'**– ಮಾತಿನಿಂದ ಎಲ್ಲರನ್ನೂ ನಡುಗಿಸುವ, ಎಲ್ಲರನ್ನೂ ತನ್ನ ಮುಷ್ಟಿಯಲ್ಲಿಟ್ಟುಕೊಳ್ಳುವ ಶಕ್ತಿಯ ಪ್ರತಿರೂಪ. **'ಹೆಣ್ಣು ಮಿಂಚು'** ಬಾಳಿನ ಬೆಳಕು, ಮನೆಯ ಜ್ಯೋತಿ–ಮುನಿದರೆ ಜ್ವಾಲಾಮುಖಿ. **'ಹೆಣ್ಣು ಆನಂದ–ಆತಂಕಗಳ ಆಗರ'**. ದಿನದ ಚಟುವಟಿಕೆಗಳಲ್ಲಿ ಅವಳು ವಹಿಸುವ ಪಾತ್ರ ಗಣನೀಯವಾದುದು. ಅಂತಹ ಉತ್ಸಾಹದ ಚಿಲುಮೆ ಇಲ್ಲದೇ ಹೋದರೆ ಆಕಾಶವೇ ತಲೆಕೆಳಗಾಗಿದೆಯೇನೋ ಎಂಬ ಆತಂಕ ಎಲ್ಲರನ್ನು ಆವರಿಸುತ್ತದೆ. **'ಹೆಣ್ಣು ದೇವಿ–ಮಾರಮ್ಮರ'** ಸಾಕಾರ–ಒಲಿದರೆ ನಾರಿ ಮುನಿದರೆ ಮಾರಿ ಎನ್ನುವಂತೆ ಒಲಿದರೆ ಸಾಕ್ಷಾತ್ ದೇವತೆ, ಮುನಿದರೆ

ಹೀಗೆ ಬಹಳ ಹಿಂದಿನಿಂದಲೂ ವತಾಖಿಕ ಪರಂಪರೆಯಲ್ಲಿ ಜೀವಂತಿಕೆಯನ್ನು ಪಡೆದುಕೊಂಡಿದ್ದ ಕಥಾಪ್ರಕಾರಕ್ಕೆ ಆಧುನಿಕ ಯುಗದಲ್ಲಿ ಹೊಸದೊಂದು ರೂಪ ದೊರೆತದ್ದು ಪಾಶ್ಚಾತ್ಯದಿಂದ.

'ಸಣ್ಣಕಥೆ'ಗಳನ್ನು ಕುರಿತಂತೆ ಅನೇಕ ಮಹನೀಯರು ಅನೇಕ ರೀತಿ ಹೇಳಿದ್ದಾರೆ. ಸಣ್ಣಕಥೆಯನ್ನು ಕುರಿತಂತೆ ರಂ.ಶ್ರೀ.ಮುಗಳಿಯವರು "ಸಣ್ಣಕಥೆಗಳು ಅಲ್ಪ ಜೀವಿಗಳ ಮಹಾಕಾವ್ಯ" ಎಂದಿದ್ದಾರೆ. ಬಿ.ಎಂ.ಶ್ರೀಕಂಠಯ್ಯನವರು "ಸಣ್ಣಕಥೆ ಬರೆಯುವುದು ಅಷ್ಟು ಸುಲಭದ ಕೆಲಸವಲ್ಲ. ಕಿರಿಯದರಲ್ಲಿ ಹಿರಿಯ ಭಾವ, ಜ್ಞಾನ, ಅನುಭವಗಳನ್ನು ತುಂಬಿ ಜೀವನಕ್ಕೆ ಬೆಳಕು ಬೀರುವುದು ಅದರ ವೈಶಿಷ್ಟ್ಯ" ಎಂದಿದ್ದಾರೆ. ತ.ರಾ.ಸುಬ್ಬರಾಯರು "ಕಾದಂಬರಿಯನ್ನು ಬರೆಯುವುದಕ್ಕಿಂತಲೂ ಸಣ್ಣಕಥೆಯನ್ನು ಬರೆಯುವುದು ಕಠಿಣವಾದ ಕಲಾಮಾರ್ಗ"[೧] ಎಂದಿದ್ದಾರೆ. ರಿಫ್ಯಾಟರ್ ಎಂಬ ವಿದ್ವಾಂಸ ಕೊಡುವ ಕಥೆಯ ವ್ಯಾಖ್ಯೆ ಹೀಗಿದೆ-"ಕಥೆ ಎಂದರೆ ಕಥನ ಸಂದರ್ಭಿಸುವ ದೇಶ ಕಾಲಗಳ ಪ್ರತಿರೂಪಣ ಹಾಗೂ ಘಟನೆ ಮತ್ತು ಪಾತ್ರಗಳ ಭಾಷಿಕ ಪ್ರತಿರೂಪ".

ಇಂತಹ ಸಣ್ಣಕಥೆ ತನ್ನ ಒಡಲಿನಲ್ಲಿ ಅನೇಕ ಅಂಶಗಳನ್ನು ಒಳಗೊಂಡಿದೆ. ಪ್ರಕೃತಿ, ಸಮಾಜ ಮತ್ತು ಮಾನವ, ಇವುಗಳ ಜೊತೆ ಜೊತೆಯಲ್ಲಿಯೇ ವಿವಿಧ ವರ್ಗಗಳ ವೈವಿಧ್ಯತೆಯ ಬದುಕು ಅನಾವರಣಗೊಂಡಿರುವುದು, ಅದರಲ್ಲಿಯೂ ಸ್ತ್ರೀಪಾತ್ರದ ವೈವಿಧ್ಯತೆಯಲ್ಲಂತೂ ಸ್ತ್ರೀಯ ಆಂತರಿಕ ಮತ್ತು ಬಾಹ್ಯ ಬದುಕೇ ತೆರೆದುಕೊಂಡು ಸಂವೇದನೆಯ ಮಹಾಪೂರದ ದರ್ಶನವಾಗುತ್ತದೆ.

ಸಣ್ಣಕಥೆಗಳು ಆಯಾ ಕಾಲದಲ್ಲಾದ ತಿರುವು, ಸವಾಲುಗಳು, ಸ್ಥಿತ್ಯಂತರಗಳು, ಮೌಲ್ಯಗಳು, ಜೀವನಶೈಲಿ ಮುಂತಾದ ವಿಶಿಷ್ಟ ಗುಣಲಕ್ಷಣಗಳಿಂದಾಗಿ ಅನೇಕ ಕೊರತೆ, ಮಿತಿಗಳನ್ನು ಎದುರಿಸಿಯೂ ತನ್ನ ಮಹತ್ವವನ್ನು ಉಳಿಸಿಕೊಂಡು ಬಂದಿದೆ. ಇದಕ್ಕೆ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಕಾಣಿಸಿಕೊಂಡ ವಿವಿಧ ಸಾಹಿತ್ಯಿಕ ಚಳುವಳಿಗಳು ಮುಖ್ಯ ಪಾತ್ರವಹಿಸಿವೆ.

ಸುಮಾರು ಕ್ರಿ.ಶ.೧೯೦೦ರಿಂದ ೧೯೨೦ರ ಅವಧಿ ಹೊಸಗನ್ನಡದ ಸಣ್ಣ ಕಥೆಗಳ ಆರಂಭಕಾಲ. ಇಂಗ್ಲೆಂಡಿನಲ್ಲಿನ ಇಂಗ್ಲೀಷ್ ಪತ್ರಿಕೆಗಳಂತೆಯೇ 'ಸುಹಾಸಿನಿ', 'ಸಚಿತ್ರಭಾರತ' ಮುಂತಾದಂತಹ ಕನ್ನಡ ಪತ್ರಿಕೆಗಳೂ ಸಹ ಪಂಜೆಮಂಗೇಶರಾಯರ 'ಭಾರತಶ್ರಾವಣ',

'ಚಿಕ್ಕತಂದೆಯ ಉಯಿಲು', 'ನನ್ನ ಚಿಕ್ಕ ತಾಯಿ', 'ನನ್ನ ಚಿಕ್ಕ ತಂದೆ' ಮುಂತಾದಂತಹ ಕಥೆಗಳನ್ನು ಪ್ರಕಟ ಮಾಡಿದವು.

ಪ್ರಸ್ತುತ ಪ್ರಬಂಧ ಕಥೆಗಳಲ್ಲಿನ ಸ್ತ್ರೀ ಪಾತ್ರಗಳನ್ನು ಕುರಿತದ್ದಾದ್ದರಿಂದ ಈ ನಿಟ್ಟಿನಲ್ಲಿ ಹೇಳಹೊರಟರೆ ಮಹಿಳೆ ಮತ್ತು ಕಥೆಯ ಸಂಬಂಧ ಬರೀ ಈ ದಶಕದ್ದಲ್ಲ. ಭಾರತೀಯ ಪರಂಪರೆಯಲ್ಲಿ ಕಥೆಗೆ ದೈವೀ ನೆಲೆಯನ್ನು ಕಲ್ಪಿಸಲಾಗಿದೆ. ಅಂತಹ ಕಥೆ ಹೇಳುವ ಕ್ರಿಯೆ ಮೊದಲು ಹುಟ್ಟಿದ್ದು ಮಹಿಳೆಯಿಂದಲೇ.

ವಸುಭಾಗ ಹೇಳುವಂತೆ ಗುಣಾಢ್ಯನ 'ಬೃಹತ್ಕಥೆ'ಯ ಮೂಲ ಶಿವನಿಂದ ಕತೆ ಕೇಳಬೇಕೆನ್ನುವ ಪಾರ್ವತಿಯ ಇಚ್ಛೆಯಲ್ಲಿದೆ. "ಅಂತಿರ್ದ ಪರಮೇಶ್ವರಂಗೆ ಗಿರಿರಾಜತನುಜೆ ಕರಕಮಲಂಗಳಂ ಮುಗಿದು, ದೇವಾ ನೀವೆನಗಪೂರ್ವಮಪ್ಪ ಕಥೆಯಂ ಪೇಳಲೇಳ್ಪುದೆನೆ, ಹರಂ ದರಹಸಿತವದನಾರವಿಂದನಾಗಿ ಪಾರ್ವತಿಗಪೂರ್ವಮಪ್ಪ ಕಥೆಗಳಂ ಪೇಳುತ್ತಿರಲು" ಆ ಕಥೆಗಳನ್ನು ಕೇಳಿದ ಗಣಪ್ರಧಾನ ಪುಷ್ಪದಂತನೆಂಬುವನು ಗುಣಾಢ್ಯನಾಗಿ ಮಾನವಲೋಕದಲ್ಲಿ ಹುಟ್ಟಿ 'ಬೃಹತ್ಕಥೆ'ಗಳನ್ನು ಬರೆದನಂತೆ.[೨]

ಕಥೆ ಹೇಳುವುದರಲ್ಲಿಯೂ ಮಹಿಳೆಯದೇ ಮೇಲುಗೈ ಆಗಿತ್ತೆನ್ನುವುದಕ್ಕೆ ಪಂಚತಂತ್ರದ 'ದೇವದತ್ತನೂ ಕುಂಟಣಿಯೂ' ಎಂಬ ಕಥೆಯಲ್ಲಿ ಬರುವ 'ಡಾವರ–ಡಾಕಿನಿ' ಪಾತ್ರ, ನಾನಾ ರೀತಿಯ ಕಥೆಗಳನ್ನು ಅತಿಶಯವಾಗಿ ಹೇಳುವ ವಿದ್ಯೆ ಹೊಂದಿದ ಇವಳು ಕಥೆ ಹೇಳುವುದಕ್ಕೆ ಒಂದು ಸಾವಿರ ಗದ್ಯಾಣದ ದಕ್ಷಿಣೆ ಕೇಳುತ್ತಿದ್ದಳಂತೆ, ಹೀಗಿದ್ದಾಗ್ಯೂ ಒಂದು ಗಂಭೀರತೆ ಮತ್ತು ಹೊಸದೊಂದು ರೂಪ ಪ್ರಾಪ್ತವಾದದ್ದು ೨೦ನೆಯ ಶತಮಾನದಲ್ಲಿಯೇ ಎನ್ನಬಹುದು.

ಸ್ತ್ರೀ ಕಥೆಯ ಸೃಷ್ಟಿಗೆ ಕಾರಣಳಾದದ್ದಷ್ಟೇ ಅಲ್ಲ ಕಥೆಯೊಂದರಲ್ಲಿ ಸ್ತ್ರೀ ಪಾತ್ರವು ಅನಿವಾರ್ಯ ಎಂಬ ಮಟ್ಟಿಗೆ ಸ್ತ್ರೀ ಪಾತ್ರಗಳು ಪ್ರಖ್ಯಾತವಾದವು. ಕಥೆಯೊಂದರಲ್ಲಿ ಸ್ತ್ರೀ ಪಾತ್ರಗಳು ಪ್ರತ್ಯಕ್ಷವಾಗೋ, ಪರೋಕ್ಷವಾಗೋ, ಬರೀ ಹೆಸರೋ, ಕೇವಲ ನೆನಪೋ–ಹೇಗೋ ಒಟ್ಟಿನಲ್ಲಿ ಸ್ತ್ರೀ ಪಾತ್ರವಿಲ್ಲದ ಕಥೆ ಕಾದಂಬರಿಗಳೇ ಇಲ್ಲವೆನ್ನಬಹುದು. ಉದಾಹರಣೆಗೆ ವೇದ–ಪುರಾಣಗಳಲ್ಲಿ, ಜನಪದ ಪುರಾಣಗಳಲ್ಲಿ ಸ್ತ್ರೀಪಾತ್ರದ ಚಿತ್ರಣವನ್ನಷ್ಟೇ ಅಲ್ಲ ಪ್ರಾಮುಖ್ಯತೆಯನ್ನೂ ಕಾಣಬಹುದು.

ಹೊಸಗನ್ನಡ ಕಥಾಸಾಹಿತ್ಯವನ್ನು ಗಮನಿಸಿದರೆ ಸ್ತ್ರೀ ಕೇಂದ್ರಿತ ಕಥೆಗಳಿಗೇನೂ ಕಡಿಮೆಯಿಲ್ಲ. ನವೋದಯದ ಆರಂಭದ ಕಾಲದಿಂದ ಪ್ರಾರಂಭಗೊಂಡು ದಲಿತ/ಬಂಡಾಯದ

ಸಾಹಿತ್ಯದವರೆಗೂ, ಸಾಕಷ್ಟು ಸಂಖ್ಯೆಯಲ್ಲಿ ರಚನೆಗೊಂಡಿವೆ, ರಚನೆಗೊಳ್ಳುತ್ತಿವೆ, ಇವತ್ತಿಗೂ ಗಟ್ಟಿತನವನ್ನು ಉಳಿಸಿಕೊಂಡು ಬೆಳೆದುಬಂದಿದೆ.

ನವೋದಯ ಸಾಹಿತ್ಯದಲ್ಲಿ ಪಂಜೆಮಂಗೇಶರಾಯರು, ಮಾಸ್ತಿವೆಂಕಟೇಶ ಅಯ್ಯಂಗಾರ್, ಕುವೆಂಪು, ಕಾಮತ್, ಆನಂದರು ಮುಂತಾದವರು; ಪ್ರಗತಿಶೀಲಕ್ಕೆ ಬಂದರೆ ಗೊರೂರು ರಾಮಸ್ವಾಮಿ ಅಯ್ಯಂಗಾರ್, ತ.ರಾ.ಸು, ನಿರಂಜನ, ಬಸವರಾಜ ಕಟ್ಟಿಮನಿ ಮುಂತಾದವರು, ನವ್ಯಕ್ಕೆ ಬಂದರೆ ಯು.ಆರ್.ಅನಂತಮೂರ್ತಿ, ಲಂಕೇಶ್, ಶಾಂತನಾಥದೇಸಾಯಿ, ಗಿರಡ್ಡಿಗೋವಿಂದರಾಯರು ಮುಂತಾದವರು; ದಲಿತ/ಬಂಡಾಯ ಕಥೆಗಳಿಗೆ ಬಂದರೆ ದೇವನೂರು ಮಹಾದೇವ, ಕಾಳೇಗೌಡ ನಾಗವಾರ, ಬರಗೂರು ರಾಮಚಂದ್ರಪ್ಪ, ಕರೀಗೌಡ ಬೀಚನಹಳ್ಳಿ, ಅಮರೇಶ ನುಗಡೋಣಿ, ಮೊಗಳ್ಳಿ ಗಣೇಶ್, ಅರವಿಂದ ಮಾಲಗಿತ್ತಿ ಮುಂತಾದ ಲೇಖಕರು ಸ್ತ್ರೀಯನ್ನೇ ಕೇಂದ್ರವಾಗಿಟ್ಟುಕೊಂಡು ಜೀವನಕ್ಕೆ ಬಹಳ ಹತ್ತಿರವಾದ ನೈಜ ಕಥೆಗಳನ್ನು ಬರೆದಿರುವುದನ್ನು ಕಾಣಬಹುದು.

ಕೆಲವು ಪ್ರಮುಖ ಕಥೆಗಳನ್ನು ಹೆಸರಿಸುವುದಾದರೆ, 'ಗೌತಮಿ ಹೇಳಿದ ಕಥೆ', 'ಮೊಸರಿನ ಮಂಗಮ್ಮ', 'ನಾನು ಕೊಂದ ಹುಡುಗಿ', 'ಮಾಟಗಾತಿ', 'ಹೆಂಡತಿಯ ಕಾಗದ', 'ಮೀನಾಕ್ಷಿ ಮನೆ ಮೇಷ್ಟ್ರು', 'ಗಂಡುಬೀರಿ ಬಸವಿ', ೦-೦=೦', 'ಕೊನೆಯ ಗಿರಾಕಿ', 'ಗಿರಿಜಾ ಕಂಡ ಸಿನಿಮಾ', 'ಪ್ರಕೃತಿ', 'ಕ್ಲಿಪ್ ಪಾಯಿಂಟ್', 'ಘಟಶ್ರಾದ್ಧ', 'ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು', 'ಕ್ಷಿತಿಜ', 'ಕನಸು', 'ಗಂಡಹೆಂಡಿರು', 'ಸನ್ನಿಹಿತ', 'ಸೋಮುವಿನ ಪ್ರಣಯ ಪ್ರಸಂಗ', 'ತಪ್ತ', 'ಕುಸುಮಬಾಲೆ', 'ಕಿರಗೂರಿನ ಗಯ್ಯಾಳಿಗಳು', 'ಒಡಲಾಳ' ಮುಂತಾದವು.

ಕಥಾ ಸಾಹಿತ್ಯಕ್ಕೆ ಲೇಖಕರಂತೆ ಲೇಖಕಿಯರೂ ಸಹ ಅನನ್ಯ ಕೊಡುಗೆಯನ್ನು ನೀಡಿದ್ದಾರೆ. ರಾಜಲಕ್ಷ್ಮಿ.ಎನ್.ರಾವ್, ಕೊಡಗಿನ ಗೌರಮ್ಮ, ತಿರುಮಲಾಂಭ ಎನ್.ಎ.ಸಾವಿತ್ರಮ್ಮ, ಶ್ಯಾಮಲಾದೇವಿ, ವೀಣಾಚ್ ಶಾಂತೇಶ್ವರ, ನೇಮಿಚಂದ್ರ, ತ್ರಿವೇಣ, ಶಾಂತಿದೇವಿ ಕಣವಿ, ವೈದೇಹಿ, ನಾಗವೇಣಿ, ಸಾ.ರಾ.ಅಬೂಬಕ್ಕರ್, ಅನುಪಮ ನಿರಂಜನ್, ಬಿ.ಟಿ.ಜಾಹ್ನವಿ, ಸರಸ್ವತಿಬಾಯಿ ರಾಜಮಾತೆ ರಾಜಲಕ್ಷ್ಮಿ ಎನ್. ರಾವ್, ಭಾನು ಮುಸ್ತಾಕ್ ಮುಂತಾದವರು.

ಲೇಖಕಿಯರ ಕೆಲವು ಪ್ರಮುಖ ಕಥೆಗಳು 'ಕರುಳಕತ್ತರಿ', 'ಮುಳ್ಳುಗಳು', 'ಕೊನೆಯದಾರಿ', 'ಹೊಸಹುಟ್ಟು', 'ನನ್ನೆದೆಯ ಕದನದಲ್ಲಿ', 'ವಾಣಿಯ ಸಮಸ್ಯೆ', 'ಕೊನೆಯ ನಿರ್ಧಾರ', 'ಒಂದು ಮೂಗುತಿಯ ಕಥೆ, ತಾಯಿ ಸಾಕೀಬಾಯಿ', 'ಧರ್ಮ ಬಲೆ ಬೀಸಿದಾಗ', 'ಒಂದು ಘಟನೆ'

ಮುಂತಾದವು. ಹೀಗೆ ಸ್ತ್ರೀಕೇಂದ್ರಿತವಾದ, ಸ್ತ್ರೀವೇದನೆಯನ್ನೊಳಗೊಂಡ ಕಥೆಗಳು ನಮ್ಮ ಕನ್ನಡ ಸಾಹಿತ್ಯದಲ್ಲಿ ಬಹಳಷ್ಟು ಕಂಡು ಬರುತ್ತವೆ.

(ಪ್ರಸ್ತುತ ಪ್ರಬಂಧವನ್ನು 'ಸ್ತ್ರೀವಾದ'ದ ಹಿನ್ನೆಲೆಯಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.) ಸಮಾಜದಲ್ಲಿ ಮಹಿಳೆಯರ ಮೇಲೆ ನಡೆಯುವ ಅನ್ಯಾಯ, ಅಸಮಾನತೆ ಮತ್ತು ಆಕೆಗೆ ಕೊಡಲ್ಪಟ್ಟ ಸ್ಥಾನಮಾನಗಳ ವಿಷಯಗಳಲ್ಲಿ ಮಹಿಳೆಯಲ್ಲೇ ಹುಟ್ಟಿದ ಬೇಸರ, ಅಸಮಾಧಾನ ಮತ್ತು ನೋವುಗಳೇ 'ಸ್ತ್ರೀವಾದಿ' ಚಟುವಟಿಕೆಗೆ ಕಾರಣ.

ಮಾನವ ಜನಾಂಗದ ಇತಿಹಾಸವೆಂದರೆ ಅದು ಅತ್ಯಂತ ಸುಂದರವಾದ, ಶಾಂತಿ ನೆಮ್ಮದಿಯಿಂದ ಕೂಡಿರುವಂತಹದಲ್ಲ. ಭಾರತದ ವಿಷಯದಲ್ಲಂತೂ ಅಲ್ಲವೇ ಅಲ್ಲ. ಬದಲಾಗಿ ಭಾರತದಲ್ಲಿ, ಕ್ರಾಂತಿಗಳು, ಹೋರಾಟಗಳು, ಚಳುವಳಿಗಳು, ಯುದ್ಧಗಳು ಇವುಗಳೊಡನೆ ಹೊಂದಾಣಿಕೆಗಳು ಇತಿಹಾಸದುದ್ದಕ್ಕೂ ಒಂದಾದ ಮೇಲೊಂದರಂತೆ ಬಾಹ್ಯವಾಗಿಯಷ್ಟೇ ಅಲ್ಲದೆ ಆಂತರಿಕವಾಗಿಯೂ ನಡೆಯುತ್ತಲೇ ಬಂದಿವೆ. ಸ್ತ್ರೀಯ ವಿಷಯದಲ್ಲಂತೂ ಇದು ಅಕ್ಷರಸಹ ಸತ್ಯ.

ಭಾರತದ ವೀರ ವನಿತೆಯರೆಂದೇ ಗುರ್ತಿಸಲ್ಪಡುವ ಝೂನ್ಸಿರಾಣಿ ಲಕ್ಷ್ಮೀಬಾಯಿ, ಕಿತ್ತೂರುರಾಣಿ ಚೆನ್ನಮ್ಮ, ಉಳ್ಳಾಲದ ಅಬ್ಬಕ್ಕ, ಕೆಳದಿಯ ಚೆನ್ನಮ್ಮ ಮುಂತಾದವರು ತಮ್ಮ ಶೌರ್ಯ-ಸಾಹಸಗಳನ್ನು ತೋರಿಸಿದ ಮಹಾನ್ ಚರಿತ್ರೆಯಿದೆ. ಆದರೆ ತದನಂತರದ ಕಾಲಘಟ್ಟದಲ್ಲಿ ಸ್ತ್ರೀಯರ ಶೌರ್ಯ ಪರಾಕ್ರಮಗಳನ್ನು ಹತ್ತಿಕ್ಕುವ ವ್ಯವಸ್ತಿತ ಪಿತೂರಿ ನಡೆದು ಸ್ತ್ರೀಯರನ್ನು ಒಂದು ಚೌಕಟ್ಟಿನೊಳಗೆ ಇಟ್ಟು ಆ ಮೂಲಕ ಗುರ್ತಿಸಲಾಗುತ್ತಿತ್ತು. ಮತ್ತು ಸ್ತ್ರೀಯನ್ನು ಎರಡನೆಯ ದರ್ಜೆಯೆಂದು ನೋಡುವ ಪ್ರವೃತ್ತಿ ಬೆಳೆದು ಅನೇಕ ರೀತಿಯ ಶೋಷಣೆಗಳನ್ನು ಅನುಭವಿಸಿದ ಮಹಿಳೆ ಬ್ರಿಟೀಷರ ಆಳ್ವಿಕೆಯ ಸಂದರ್ಭದಲ್ಲಿನ ಬದಲಾವಣೆಗಳನ್ನು ಸದುಪಯೋಗಪಡಿಸಿಕೊಂಡು ಎಚ್ಚೆದ್ದ ಪರಿಣಾಮವಾಗಿ ಇಂದು ಒಂದು ಬೃಹತ್ ಶಕ್ತಿಯಾಗಿ ಮಹಿಳೆಯನ್ನು ಗುರ್ತಿಸಲು ಸಾಧ್ಯವಾಗಿದೆ.

ಹಿಂದೆ ಸ್ತ್ರೀಯನ್ನು ಸಾಮಾನ್ಯ ಸ್ತ್ರೀಯೆಳೆಂದು ತುಚ್ಛವಾಗಿ ಕಾಣುತ್ತಿದ್ದ ಸಮಾಜ ಇಂದು ಮಹಿಳೆಯನ್ನು 'ಮಹಿಳಾಶಕ್ತಿ' ಎಂದು ಕರೆದು ವಿಶೇಷತೆಯಿಂದ ಗುರ್ತಿಸಲಾಗುತ್ತಿದೆ; ಎಂದರೆ ಅದು ಏಕಾಏಕಿ ಶಕ್ತಿಯಾಗಿ ಹೊರಹೊಮ್ಮಿದ್ದಲ್ಲ. ಅನೇಕ ಪ್ರತಿಭಟನೆಗಳು, ಆಂದೋಲನಗಳು, ಹೋರಾಟಗಳು, ಚಳುವಳಿಗಳು ನಿರಂತರವಾಗಿ ನಡೆದು ಸ್ತ್ರೀಯ ಶೋಷಣೆಯ ಪ್ರಮಾಣವನ್ನು

ಕಡಿಮೆಮಾಡಿ, ಸ್ತ್ರೀಯರ ಸ್ಥಾನಮಾನವನ್ನು ಗುರ್ತಿಸುವಲ್ಲಿ ವಿಶ್ವದಾದ್ಯಂತ ಮಹಾ ಮಹಾ ಹೋರಾಟಗಳೇ ನಡೆದಿವೆ.

ಭಾರತದಲ್ಲಿನ ಜಾತಿ, ಧರ್ಮ, ವರ್ಣ, ವರ್ಗ ವೈಷಮ್ಯಗಳಿಂದಾಗಿ ಪ್ರಪಂಚದ ಉಳಿದೆಲ್ಲಾ ಕಡೆಗಳಿಗಿಂತಲೂ ಭಾರತದಲ್ಲಿ ಸ್ತ್ರೀಯರ ಮೇಲಿನ ಶೋಷಣೆ ಹೆಚ್ಚಿನ ಪ್ರಮಾಣದಲ್ಲಿ ನಡೆದಿರುವುದು ಶೋಚನೀಯ ಸ್ಥಿತಿ. ಅಂತಹ ಶೋಷಣೆಯ ವಿರುದ್ಧದ ಹೋರಾಟಗಳು ಆಧುನಿಕ ಭಾರತದಲ್ಲಿ ಸ್ಥಾನಮಾನವನ್ನು ಪಡೆದು ಇಂದು ಶಕ್ತಿಯಾಗಿ ಹೊರಹೊಮ್ಮಿದೆ.

ವೇದಗಳ ಕಾಲದಲ್ಲಿ ಭಾರತೀಯ ಮಹಿಳೆಗೆ ಉನ್ನತ ಸ್ಥಾನಗಳಿದ್ದು ಆರ್ಯರ ಆಗಮನದ ನಂತರ ಸ್ತ್ರೀಯ ಪ್ರಾವೀಣ್ಯತೆಯನ್ನು ಹತ್ತಿಕ್ಕುವ ಕೆಲಸಗಳು ನಡೆದು ಸ್ತ್ರೀಯನ್ನು ಅತ್ಯಂತ ನಿಕೃಷ್ಟವಾಗಿ ಕಾಣಲಾಯಿತು. ದೈಹಿಕ-ಮಾನಸಿಕ ಹಿಂಸೆಯಿಂದ ಬಿಡುಗಡೆ ಬಯಸುತ್ತಿದ್ದ ಸ್ತ್ರೀಗೆ ೧೨ನೇ ಶತಮಾನದ ಬಸವಣ್ಣನವರ ಧಾರ್ಮಿಕ, ಸಾಮಾಜಿಕ ಕ್ರಾಂತಿಯು ಪ್ರಮುಖ ವೇದಿಕೆಯಾಯಿತು. ೧೨-೧೩ನೇ ಶತಮಾನದಲ್ಲಿ ಸುಧಾರಿಸಿದ್ದ ಪರಿಸ್ಥಿತಿ ತದನಂತರದ ಕಾಲದಲ್ಲಿ ಮತ್ತಷ್ಟು ಕ್ರೂರ ರೂಪವನ್ನು ತಾಳಿ ಶೋಷಣೆಯ ದೈತ್ಯಾಕಾರತೆ ಬೆಳೆಯತೊಡಗಿತು. ಶೋಷಣೆಯ ವಿರುದ್ಧದ ಪ್ರತಿಭಟನೆಗೆ ಕಾಯುತ್ತಿದ್ದ ಜೀವಗಳು, ತಮ್ಮ ಸ್ಥಾನಮಾನದ ಮಹತ್ವವನ್ನು ತಿಳಿಯಪಡಿಸುವ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗಲು ಹವಣಿಸುತ್ತಿದ್ದವು. ಆ ಸಮಯಕ್ಕೆ ಸರಿಯಾಗಿ ರಾಷ್ಟ್ರದಾದ್ಯಂತ ಸಾಮಾಜಿಕ, ಧಾರ್ಮಿಕ ಸುಧಾರಣಾ ಚಳುವಳಿಗಳು ಪ್ರಾರಂಭವಾಗಿದ್ದು ಸ್ತ್ರೀ ಜನ್ಮದ ಪುಣ್ಯವೆನ್ನಬಹುದು.

ಸಮಾಜದಲ್ಲಿನ ಸ್ತ್ರೀಯ ಸ್ಥಾನಮಾನವನ್ನು ಜಗಜ್ಜಾಹಿರ ಮಾಡುವ ಮತ್ತು ಸ್ತ್ರೀಯ ಹಕ್ಕು-ಭಾದ್ಯತೆಗಳ ಬಗ್ಗೆ ಪುರುಷ ಪ್ರಧಾನ ವ್ಯವಸ್ಥೆಗೆ ಅರಿವುಮೂಡಿಸುವ ನಿಟ್ಟಿನಲ್ಲಿ 'ಸ್ತ್ರೀವಾದ' ಚಳುವಳಿಯು ರೂಪ ಪಡೆದಿದೆ.

"ಸ್ತ್ರೀವಾದ ಎನ್ನುವುದು ಕೇವಲ ನಿರ್ದಿಷ್ಟ ತಾತ್ವಿಕ ಆಕಾರದೊಳಗೆ ಮಿತಗೊಳಿಸಿ ಇಡಲಾಗದು. ಸ್ತ್ರೀವಾದವು ಎಲ್ಲ ಕಾಲ, ದೇಶ, ಸಂಸ್ಕೃತಿಯ ಸ್ತ್ರೀಯರಿಗೆ ಏಕರೂಪವಾಗಿ ಅನ್ವಯಿಸುವಂತಹ ಅಮೂರ್ತ ತತ್ವವಲ್ಲ. ಸ್ತ್ರೀವಾದವನ್ನು ಕುರಿತ ನಿರ್ವಚನ ನಮ್ಮವಾದುದು. ನಿರಂತರವಾಗಿ ಬದಲಾಗುವ ಐತಿಹಾಸಿಕ ಹಾಗೂ ಸಾಂಸ್ಕೃತಿಕ ವಾಸ್ತವಿಕತೆಯ ಆಧಾರದ ಮೇಲೆ ಸ್ತ್ರೀವಾದ ನಿಂತಿದೆ. ಭಿನ್ನ ಸ್ತರದ ಪ್ರಜ್ಞೆ, ಗ್ರಹಿಕೆ, ಕ್ರಿಯೆಗಳ ಸರಣಿಯನ್ನು ಆಧರಿಸಿ ಸ್ತ್ರೀವಾದದ ವ್ಯಾಖ್ಯೆ ಬಹುಮುಖಿಯಾಗಿದೆ.[೩]

ಕ್ರಿ.ಶ. ೧೯೭೫ ರ ಉತ್ತರಾರ್ಧದಲ್ಲಿ ಪಶ್ಚಿಮದಲ್ಲಿ ಸಂಭವಿಸಿದ ಅಂತರಾಷ್ಟ್ರೀಯ ಮಹಿಳಾ ಚಳುವಳಿಯು ಮಹಿಳೆಯರ ರಾಜಕೀಯ ಆರ್ಥಿಕ ಹಕ್ಕುಗಳು, ಜನಾಂಗೀಯ ಗುಲಾಮಗಿರಿಯ ಪದ್ಧತಿ ಮುಂತಾದ ಧ್ಯೇಯವನ್ನು ಹೊಂದಿದ್ದು; ಈ ಚಳುವಳಿಯ ಕಾವಿನಿಂದ ಸ್ತ್ರೀವಾದಿ ವಿಮರ್ಶೆಯು ಹುಟ್ಟಿತು. ಆರಂಭದ ಹಂತದಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯು ಸಾಹಿತ್ಯದಲ್ಲಿನ ರೂಢಿಗತವಾದ ಸ್ತ್ರೀ ದ್ವೇಷದ ಅಂಶಗಳನ್ನು, ಸ್ತ್ರೀಯರನ್ನು ದೇವತೆ-ರಾಕ್ಷಸಿಯರ ಸಿದ್ಧ ಪ್ರತೀಕಗಳಲ್ಲಿ ಚಿತ್ರಿಸುವುದನ್ನು ಶ್ರೇಷ್ಠ ಕೃತಿಗಳಲ್ಲೂ, ಜನಪ್ರಿಯ ಸಾಹಿತ್ಯದಲ್ಲೂ, ಸಾಹಿತ್ಯಿಕವಾದ ಸ್ತ್ರೀನಿಂದನೆ, ಬೆದರಿಕೆ ತಂತ್ರಗಳಿರುವುದನ್ನು ಹಾಗೂ ಸಾಹಿತ್ಯ ಚರಿತ್ರೆಯಿಂದ ಮಹಿಳೆಯರು ಹೊರಗಿಡಲ್ಪಟ್ಟಿರುವುದನ್ನು ಬಯಲಿಗೆಳೆಯುತ್ತ ತನ್ನ ಗಮನವನ್ನು ಕೇಂದ್ರಿಕರಿಸಿ ನಂತರದ ಹಂತದಲ್ಲಿ ಅವರದೇ ಆದ ಸಾಹಿತ್ಯ ಪರಂಪರೆಯೊಂದನ್ನು ಸೃಷ್ಠಿಸತೊಡಗಿದರು.

ಈವರೆಗೆ ಬಂದಿರುವ ಮಹಿಳಾ ಚಿಂತನೆ ಹಾಗೂ ಸ್ತ್ರೀಪರ ಆಲೋಚನೆಗಳನ್ನು ಮರುಚಿಂತನೆಗೆ, ಮರುವ್ಯಾಖ್ಯಾನಕ್ಕೆ ಹಾಗೂ ಪುನರ್‌ಮೌಲೀಕರಣಕ್ಕೆ ಒಳಗುಪಡಿಸುವಂತಹ ನಿಟ್ಟಿನಲ್ಲಿ 'ಮಹಿಳಾ ಆಧ್ಯಯನ' ಮಹಿಳೆಯನ್ನು ಸಬಲೀಕರಣಗೊಳಿಸುವತ್ತ ಸಾಗುತ್ತಿದೆ. ಹಾಗಾಗಿ ಸ್ತ್ರೀ-ಪುರುಷರೆನ್ನದೆ ಸಾಹಿತ್ಯದಲ್ಲಿ ಮತ್ತು ಸಮಾಜದಲ್ಲಿ ಅನೇಕ ಹೋರಾಟಗಳನ್ನು, ಅರಿವನ್ನು ಮಹಿಳೆಯ ಪರವಾಗಿ ತೋರಿಸುತ್ತಿರುವುದನ್ನು ಗಮನಿಸಬಹುದು. ಅಂತಹ ಮಹಿಳಾ ಪರವಾದ ನಿಲುವುಳ್ಳ ಕಥೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

ಸ್ತ್ರೀಯನ್ನು ಕುರಿತಂತೆ ಹಿಂದಿನಿಂದ ಇವತ್ತಿನವರೆಗೂ ಅನೇಕಾನೇಕ ಬದಲಾವಣೆಗಳು ಕಂಡು ಬಂದಿವೆಯಾದರೂ ಹೆಣ್ಣಿನ ತಲ್ಲಣ, ತಳಮಳ, ಆತಂಕಗಳಿಗೆ ಕೌಟುಂಬಿಕ ನೆಲೆಯಲ್ಲಾಗಲಿ, ಸಾಮಾಜಿಕ ನೆಲೆಯಲ್ಲಾಗಲೀ, ಮಾನವೀಯತೆಯ, ನೀತಿಯ ನ್ಯಾಯಯುತವಾದ ಸ್ಥಾನಮಾನ ದೊರೆತಿಲ್ಲವೆಂದೇ ಹೇಳಬಹುದು. ಪುರುಷ ಹೊರಿಸಿರುವ ಆದರ್ಶದ ಭಾರದಲ್ಲಿ ಹೆಣ್ಣು ಗಳಿಸಿದ್ದು ಕಣ್ಣೀರು ಮತ್ತು ನಿಟ್ಟುಸಿರು ದೇಹ ಮತ್ತು ಮನಸ್ಸನ್ನು ಸುಡುವ, ಕಂಡೂ ಕಾಣದ ಹಾಗೆ ಇರುವ ಬೆಂಕಿಯ ಮಧ್ಯದಲ್ಲಿ ನಿಂತು ಬದುಕನ್ನು ಸಾಗಿಸುತ್ತ, ಬೆಂಕಿಯ ಉರಿಯನ್ನು ಕಡಿಮೆ ಮಾಡುವ, ಇಲ್ಲವೇ ಬೆಂಕಿಯನ್ನೇ ಆರಿಸುವ ಮಳೆಗಾಗಿ ಕಾಯುವ ಹೆಣ್ಣು ಹೃದಯಕ್ಕೆ ಸಾಂತ್ವನದ ರೀತಿಯಲ್ಲಿ, ಹೆಣ್ಣು ಹೃದಯಕ್ಕಷ್ಟೇ ಅಲ್ಲದೆ ಗಂಡು ಹೃದಯಕ್ಕೂ ಅರಿವಾಗುವ ಹಾಗೆ ಚಿಕ್ಕಣ್ಣನವರ ಕಥೆಗಳು ಮೂಡಿಬಂದಿವೆ.

ಸ್ತ್ರೀವಾದ, ಸ್ತ್ರೀಪರ ಚಿಂತನೆ, ಸ್ತ್ರೀಪ್ರಜ್ಞೆ-ಇವೇ ಮೊದಲಾದವುಗಳ ನೆಲೆಯಿಂದಲೇ ಅಂತಃಕರಣದ ಮಹಾಪೂರ ಹರಿಯುವುದು ಎಂಬುದು ಜನಜನಿತವಾದರೂ ಒಮ್ಮೊಮ್ಮೆ ಅದು

ಕ್ಲೀಷೆಯಾಗುತ್ತದೆ. ಆದರೆ ಮೂಲಭೂತವಾಗಿ ಬದುಕಿನ ಬಗ್ಗೆ ಕಾಳಜಿ ಇರುವ ಜೀವಗಳಲ್ಲಿ ಅಂತರ್ಗತವಾಗಿಯೇ ಹೆಣ್ಣುತನದ ಅಂತರ ಸೆಲೆಯು ಗುಪ್ತಗಾಮಿನಿಯಾಗಿ ಹರಿಯುತ್ತಿರುತ್ತದೆ; ಮತ್ತು ಹಾಗಿದ್ದಾಗಲೇ ಬದುಕಿಗೊಂದು ಸಾಮರಸ್ಯತೆ ಬರುವುದು. ಇಂತಹ ಸಾಮರಸ್ಯವನ್ನು ಹುಡುಕುವ ಮನಸ್ಸುಗಳಿಗೆ ನಗರಗಳಿಗಿಂತಲೂ ಇಂದು ಬದುಕಿನ ಬೇರು ಇರುವ ಹಳ್ಳಿಗಳೇ ವಿಶಿಷ್ಟ ನೆಲೆಯಾಗುತ್ತಿರುವುದೊಂದು ಆಧುನೀಕರಣದ ಸಂದರ್ಭದಲ್ಲಿಯೂ ಅಪರೂಪದ ಸಂಗತಿಯಾಗಿದೆ. ಇಂತಹ ಅಪರೂಪದ ಸೆಲೆ ಚಿಕ್ಕಣ್ಣನವರ ಎಲ್ಲಾ ಕೃತಿಗಳಲ್ಲಿಯೂ ಹಾಸುಹೊಕ್ಕಾಗಿರುವುದನ್ನೂ ಕಾಣಬಹುದು.

ಸ್ತ್ರೀವಾದವೆಂಬುದು ಪುರುಷ ಪ್ರಧಾನ ಮತ ಮತ್ತು ಸಾಮಾಜಿಕ ಸಂರಚನೆಯನ್ನು ವಿಮರ್ಶಿಸುವಂಥ ಚಳುವಳಿ. ಸ್ತ್ರೀವಾಧದ ಪ್ರಕಾರ ಪುರುಷ ಪ್ರಧಾನತೆಯ ನಿರ್ದಿಷ್ಟ ಚಾರಿತ್ರಿಕ ಸನ್ನಿವೇಶದ ಫಲವೇ ಹೊರತು ಸಹಜವಾದುದೇನೂ ಅಲ್ಲ. ಆದ್ದರಿಂದ ಪುರುಷ ಪ್ರಧಾನತೆಯ ಈ ಪರಿಸ್ಥಿತಿಯನ್ನು ಬದಲಾಯಿಸವುದು ಸಾಧ್ಯ. ಇತಿಹಾಸವನ್ನು ಗಮನಿಸಿದರೆ ಉದ್ದಕ್ಕೂ ಪುರುಷರು ಸ್ತ್ರೀಯರನ್ನು ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸಿರುವುದು ಕಂಡು ಬರುತ್ತದೆ. ಇದು ಬಹುಮಟ್ಟಿಗೆ ಲಿಂಗಭೇಧವನ್ನೂ ಆಧರಿಸುವಂಥದ್ದು. ಈ ಅಸಮಾನ ಸಂಬಂಧದ ಸ್ಥಿತಿಯನ್ನು ಬದಲಾಯಿಸಬೇಕೆನ್ನುವುದು ಸ್ತ್ರೀವಾದಿಗಳ ನಿಲುವು. ಮಹಿಳೆಯ ಅನುಭವ ಚರಿತ್ರೆಗಳನ್ನು ಹೊಸ ರೀತಿಯಲ್ಲಿ ವ್ಯಾಖ್ಯಾನಿಸಿ ಅಸಮಾನತೆಯ ಈ ಯಥಾಸ್ಥಿತಿಯನ್ನು ಬದಲಾಯಿಸುವ ಹೊಸದೊಂದು ನಿಲುವನ್ನು ಮೈಗೂಡಿಸಿಕೊಳ್ಳುವಲ್ಲಿ, ಹೊಸ ಅಲೆಯನ್ನು ಮೂಡಿಸುವಲ್ಲಿ ಚಿಕ್ಕಣ್ಣನವರ ಕಥೆಗಳು ಪ್ರಭಾವ ಬೀರುತ್ತವೆ ಎನ್ನಬಹುದು.

ಕಾ.ತ.ಚಿಕ್ಕಣ್ಣನವರ ೫೬ ಕಥೆಗಳನ್ನೊಳಗೊಂಡ 'ಕಂಡೇರಿ'ಯಲ್ಲಿ ಮಹಿಳಾ ಪ್ರಧಾನ ಕಥೆಗಳೇ ಹೆಚ್ಚು ಮತ್ತು ಅವುಗಳೇ ಗಾಢ ಪರಿಣಾಮವನ್ನು ಬೀರುವಂತಹವು. ಅವರ ಕಥೆಗಳಲ್ಲಿ ಬಹುಪಾಲು ಮಹಿಳಾಪರ ಚಿಂತನೆಗಳಿರುವುದನ್ನು ಕಾಣಬಹುದು. ಹುಟ್ಟು ಸ್ತ್ರೀ ಸಂವೇದನಾಕಾರರಾಗಿರುವ ಚಿಕ್ಕಣನವರು ಸಮಾಜದಲ್ಲಿನ ಎಲ್ಲಾ ವರ್ಗದ ಮಹಿಳೆಯರ ಸ್ಥಿತಿಯನ್ನು–ತೊಳಲಾಟಗಳನ್ನು ಸಹಜವಾಗಿಯೇ ಚಿತ್ರಿಸಿದ್ದಾರೆ.

ಚಿಕ್ಕಣ್ಣನವರ ಕಾದಂಬರಿ 'ದಂಡೆ'ಯಲ್ಲಿನ ಅವ್ವಯ್ಯನ ಪಾತ್ರದ ಚಿತ್ರಣವಂತೂ ಮನಸ್ಸಿನಲ್ಲಿ ಅಚ್ಚೊತ್ತುವಂತಹದ್ದು. ತೊಡೆಯ ಮೇಲಿನ ಮಚ್ಚೆಯ ಕಾರಣದಿಂದಾಗಿ ಓಡಾಟದ ನಿರ್ಬಂಧಕ್ಕೆ ಒಳಗಾದದ್ದು, ಜಾತಿಯ ಕಾರಣದಿಂದಾಗಿ ತಾನು ಪ್ರೀತಿಸಿದವರನ್ನು ಮದುವೆಯಾಗಲು ಸಾಧ್ಯವಾಗದೇಹೋದದ್ದು, ಹೆಣ್ಣಾಗಿ ಹುಟ್ಟಿದ್ದರಿಂದಲೇ ಶಿಕ್ಷಣದಿಂದ

ವಂಚಿತವಾದದ್ದು-ಮುಂತಾದಂತಹ ಪರಂಪರಾಗತ ನಂಬಿಕೆಗಳ ಮೂಲಕ ಹೆಣ್ಣನ್ನು ಶೋಷಿಸುವ ನೆಲೆಗಳನ್ನು ಅವ್ವಯ್ಯನ ಪಾತ್ರ ಪ್ರತಿನಿಧಿಸುತ್ತದೆ ಮತ್ತು ಅದರ ಜೊತೆ ಜೊತೆಗೇ ಪುರುಷ ಪ್ರಧಾನ ಸಮಾಜದ ಮುಖಗಳು ಅನಾವರಣಗೊಳ್ಳುತ್ತಾ ಹೋಗುತ್ತದೆ.

ಈ ಮೊದಲೇ ಹೇಳಿರುವ ಹಾಗೆ ಚಿಕ್ಕಣ್ಣನವರ ಕಥೆಗಳಲ್ಲಿ ಬಹಳಷ್ಟು ಕಥೆಗಳು ಸ್ತ್ರೀಕೇಂದ್ರಿತ, ಸ್ತ್ರೀಸಂವೇದನೆಯನ್ನೊಳಗೊಂಡ ಕಥೆಗಳೇ ಆಗಿವೆ. ಇವರು ಕಥೆಗಳಲ್ಲಿ ಅನುಸರಿಸುವ ತಂತ್ರ ಬೇರೆ ಬೇರೆಯಾದರೂ ಸಹ ಅವೆಲ್ಲವೂ ಸ್ತ್ರೀ ಚಿಂತನೆಯ ಸಂಕೇತಗಳೇ ಆಗಿವೆ.

ಆಧುನಿಕ ಕನ್ನಡ ಸಾಹಿತ್ಯದಲ್ಲೇ ನವ್ಯ ಸಾಹಿತ್ಯದ ಕೊಡುಗೆ ಅಪಾರವಾಗಿದೆ. ನಿಷ್ಠುರ ಪ್ರಾಮಾಣಿಕತೆ, ಅತೀವ ಶಬ್ದ ಕಾರ್ಪಣ್ಯ ಮತ್ತು ಸಿದ್ಧ ಮಾದರಿಗಳ ನಿರಾಕರಣೆ ಈ ಎಲ್ಲ ಕಾರಣದಿಂದಲೇ ನವ್ಯ ಸಾಹಿತ್ಯದ ಕಾಲದಲ್ಲಿ ಅತ್ಯುತ್ತಮವಾದ ಕಥೆ, ಕವನಗಳು, ಕಾದಂಬರಿಗಳು ರಚನೆಗೊಂಡವು. ಹಾಗಿದ್ದರೂ ನವ್ಯ ಸಾಹಿತ್ಯಕ್ಕೆ ಒಂದು ಆಪಾದನೆ ಇದೆ. ಹೆಚ್ಚಿನ ನವ್ಯ ಕಥೆಗಳ ವಸ್ತು ಗ್ರಾಮ, ಗ್ರಾಮದಲ್ಲಿನ ಬಾಲ್ಯ, ಗ್ರಾಮೀಣ ಪರಿಸರವೇ ಆದರೂ ಅದನ್ನು ರಚಿಸುವ ನಿರೂಪಕನ ಪ್ರಜ್ಞೆ ನಗರ ಕೇಂದ್ರಿತವಾಗಿದ್ದರಿಂದ ಈ ಕಾಲದ ಕಥೆ; ಕಾದಂಬರಿಗಳು ಅತ್ಯಂತ ಸೀಮಿತತೆಯಿಂದ ಕೂಡಿದ್ದು, ಬದುಕಿನ ಪರಿಪೂರ್ಣ ಚಿತ್ರಣ ಮೂಡಲಿಲ್ಲವೆಂದೇ ಹೇಳಬಹುದು.

ಎಪ್ಪತ್ತರ ದಶಕದಲ್ಲಿ ಪ್ರಾದೇಶಿಕ ದಲಿತ ಸಮುದಾಯದ ಭಾಷೆ, ಸಾಹಿತ್ಯ ಕ್ಷೇತ್ರದ ಮೂಲಕ ಅಸ್ತಿತ್ವ ಕಲ್ಪಿಸಿಕೊಳ್ಳುತ್ತಾ ಸಮಾಜಿಕ ಕ್ಷೇತ್ರದಲ್ಲೊಂದು ಬಿಸಿ ಹುಟ್ಟಿಸಿ ಸಾಮಾಜಿಕ ನ್ಯಾಯದ ಒತ್ತಾಸೆಯನ್ನು ತುಂಬಿದ್ದು ಗಮನಾರ್ಹ ಸಂಗತಿ. ಹಳೇ ಮೈಸೂರು ಭಾಗದ ದುಡಿಯುವ ವರ್ಗದ ಬದುಕನ್ನು ಜನಪದ ಭಾಷೆಯಲ್ಲಿ ಅನಾವರಣಗೊಳಿಸಿದ್ದು ಮೇಲ್ವರ್ಗದ ಸಾಹಿತಿ, ವಿಮರ್ಷಕರಿಗೆ ಒಳಗೊಳಗೆ ತಳಮಳ ಮೂಡಿಸಿದ್ದರೂ ಹೊರಗೆ ಮಾತ್ರ ಅವರಿಗೆ ಬಹುಪಯೋಗಿಯಾಗಿಯೇ ಕಾಣಿಸಿತ್ತು ಎಂಬುದು ಬೇರೆ ಮಾತು. ಅಟ್ಟದ ಮೇಲೆ ನಿಂತ ಪುರೋಹಿತರಿಗೆ ಹಟ್ಟಿಯೊಳಗಿನ ಕತ್ತಲೆಯ ಲೋಕದ ಬೆತ್ತಲೆ ಬದುಕಿನ ಕರಾಳ ಚಿತ್ರಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗದು ಎಂಬ ನವ್ಯದ ಈ ಅಪರಿಪೂರ್ಣತೆಗೆ ಪ್ರತಿಕ್ರಿಯೆಯಾಗಿಯೇ ದಲಿತ-ಬಂಡಾಯ ಸಾಹಿತ್ಯ ಹುಟ್ಟಿ ಸಾಹಿತ್ಯದ ಅಂಚಿನಲ್ಲಿದ್ದ ಬುಡಕಟ್ಟು ಜನಾಂಗಗಳ, ದಲಿತರ, ಅನಕ್ಷರಸ್ಥ, ಗ್ರಾಮೀಣ ಜನರ, ಅಲ್ಪಸಂಖ್ಯಾತರ ಅನನ್ಯ ದಟ್ಟ ಅನುಭವಗಳು ಸಾಹಿತ್ಯದ ಕೇಂದ್ರ ವಸ್ತುಗಳಾದವು. ಇಂತಹ ಮಹತ್ವಪೂರ್ಣ ಬದಲಾವಣೆಗೆ ದೇವನೂರು ಮಹದೇವ, ಪೂರ್ಣಚಂದ್ರತೇಜಸ್ವಿಯವರು ಭದ್ರವಾದ ಬುನಾದಿ ಹಾಕಿಕೊಟ್ಟರು.

ಈ ಹಾದಿಯಿಂದ ಪ್ರೇರೇಪಿತರಾದ ಕುಂವೀ, ರಾಘವೇಂದ್ರ ಪಾಟೀಲ, ಬೋಳುವಾರು, ಕಟ್ಪಾಡಿ, ಸಾರಾ ಅಬೂಬಕರ್, ವೈದೇಹಿ, ವೀಣಾ ಶಾಂತೇಶ್ವರ, ಜಯಂತಕಾಯ್ಕಿಣಿ, ಕೃಷ್ಣಮೂರ್ತಿ ಹವನೂರು, ಬೆಸಗರಹಳ್ಳಿ ರಾಮಣ್ಣ, ಅರವಿಂದ ಮಾಲಗಿತ್ತಿ ಮುಂತಾದಂತಹ ಪ್ರತಿಭಾನ್ವಿತರು ಸ್ತ್ರೀಪುರುಷರೆನ್ನದೆ ಕನ್ನಡ ಕಥನ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಇಂತಹ ಕಥೆಗಾರರ ಗುಂಪಿಗೆ ಸೇರಿದವರು ಕಾ.ತ.ಚಿಕ್ಕಣ್ಣನವರು.

ಪ್ರಗತಿಶೀಲ ಕಥೆಗಳಂತೆ ಸಾಮಾಜಿಕ ಸುಧಾರಣೆ ಮತ್ತು ಸಾಮಾಜಿಕ ನ್ಯಾಯ ಪ್ರತಿಪಾದನೆ ಇವುಗಳಿಂದ ಕಥೆಗಳ ದೃಷ್ಟಿಕೇಂದ್ರವನ್ನೇ ತಪ್ಪಿಸಿ ಮನುಷ್ಯನ ಮನಸ್ಸು ಮತ್ತು ಮನುಷ್ಯನ ಮೂಲ ಪ್ರವೃತ್ತಿಗಳ ಕಡೆ ತಿರುಗಿಸಿದ್ದು ಚಾರಿತ್ರಿಕವಾಗಿ ಮಹತ್ವದ ಸಂಗತಿಯಾಗಿದೆ. ಇಂತಹ ಸ್ತ್ರೀಯ ಮನಸ್ಸು ಮತ್ತು ಆಕೆಯ ಮೂಲ ಪ್ರವೃತ್ತಿಗಳ ಒಳಹೊರಗನ್ನು ಸಹಜವಾಗಿ ಅನಾವರಣಗೊಳಿಸುವಂತಹ ಕಥೆಗಳು ಚಿಕ್ಕಣ್ಣನವರ ಕಥೆಗಳು.

ಚಿಕ್ಕಣ್ಣನವರು ಬರೆಯಲು ಪ್ರಾರಂಭಿಸಿದ ಕಾಲ ನವ್ಯ ಮತ್ತು ದಲಿತ ಬಂಡಾಯದ ಸಂಕ್ರಮಣದ ಕಾಲ ಕನ್ನಡ ಸಾಹಿತ್ಯ ಸಂಸ್ಕೃತಿ ನವ್ಯದಿಂದ ಬಂಡಾಯದೆಡೆಗೆ ಹೊರಳುತ್ತಿದ್ದ ಕಾಲ ಈ ಕಾಲಕ್ಕಾಗಲೇ ಕನ್ನಡದ ಸೂಕ್ಷ್ಮ ಲೇಖಕರಾದ ಪಿ.ಲಂಕೇಶ್, ಶಾಂತನಾಥ ದೇಸಾಯಿ, ಯು.ಆರ್.ಅನಂತಮೂರ್ತಿ, ತೇಜಸ್ವಿ, ದೇವನೂರು ಮಹದೇವ, ಬೆಸಗರಹಳ್ಳಿ ರಾಮಣ್ಣ, ಯಶವಂತ ಚಿತ್ತಾಲ–ಮುಂತಾದಂತಹವರು ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಛಾಪನ್ನೇ ಮೂಡಿಸಿದ್ದರು. ಇಂತಹ ಉತ್ಕೃಷ್ಟ ಹಿನ್ನೆಲೆಯಿದ್ದರೂ ಚಿಕ್ಕಣ್ಣನವರು ಯಾರನ್ನೂ ಅನುಕರಣೆ ಮಾಡದೆ ತಮ್ಮದೇ ಆದ ಶೈಲಿಯಲ್ಲಿ ಕಥೆಯನ್ನು ಬರೆದು ದೇಸಿಯತೆಯ ಸೊಗಡನ್ನು ಮೆರೆದಿದ್ದಾರೆ.

ಚಿಕ್ಕಣ್ಣನವರ ಕಥೆ ಮತ್ತು ಕಾದಂಬರಿಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಪ್ರಮುಖವಾಗಿ ಎರಡು ನೆಲೆಗಳು ಕಂಡುಬರುತ್ತವೆ. ನವ್ಯ ಧೋರಣೆಗಳನ್ನೊಳಗೊಂಡೂ ದಲಿತ ಬಂಡಾಯದ ಚೌಕಟ್ಟಿನೊಳಗಿರುವ ಅಂಶಗಳು ಮತ್ತು ಪ್ರಜ್ಞಾಪೂರ್ವಕವಾಗಿಯೇ ಆ ಚೌಕಟ್ಟನ್ನು ಮೀರುವ ಅಂಶಗಳು. ಈ ಎರಡು ನೆಲೆಗಳನ್ನು ಅವರ ಕಥೆಗಳಲ್ಲಿ ಕಾಣಬಹುದು.

ಇವರ ಬಹುತೇಕ ಕಥೆಗಳ ವಸ್ತು ಗ್ರಾಮೀಣ ಪರಿಸರದಲ್ಲಿ ನಿರಂತರವಾಗಿ ನಡೆಯುವ 'ಶೋಷಣೆ' ಮತ್ತು ಅದರ ವಿರುದ್ಧ ಬಂಡೇಳುವ 'ಪ್ರತಿಭಟನೆ' ಅಥವಾ ಏನನ್ನೂ ಸಾಧಿಸಲಾಗದ

'ಹತಾಶೆ' ಸ್ಥಿತಿ. ಶೋಷಣೆ ಎನ್ನುವಂತಹದ್ದು ಹಳ್ಳಿ ಮತ್ತು ಪಟ್ಟಣವೆಂಬ ಬೇಧವಿಲ್ಲದೆ, ಸೂಕ್ಷ್ಮವಾಗೊ ವಿಶಾಲವಾಗೋ, ಗುಪ್ತಗಾಮಿನಿಯಾಗಿ ನಡೆಯುತ್ತಲೇ ಇರುತ್ತದೆ.

ಜಗತ್ತಿನಲ್ಲಿ ನಡೆಯುವ ಶೋಷಣೆಗೆ ಪ್ರಮುಖ ಕಾರಣ ಜಾತಿ ವ್ಯವಸ್ಥೆ. ಇದರ ಜೊತೆಗೆ ವೈಯಕ್ತಿಕ ಸ್ವಾರ್ಥ, ಲೋಭಗಳು ಧಾರ್ಮಿಕ ಭೀತಿ, ಅಂಧ ಆಚರಣೆಗಳು ಮುಂತಾದಂತಹವೂ ಶೋಷಣೆಗೆ ಕಾರಣವಾಗುತ್ತವೆ ಎಂಬುದನ್ನು ಕಥೆಗಳಲ್ಲಿ ಕಾಣಬಹುದು. ಜಾತಿಯ ಶೋಷಣೆಯಿಂದ ವೈಯಕ್ತಿಕ ಪ್ರತಿಷ್ಠೆ, ಸ್ವಾರ್ಥ, ಕಾಮನೆಗಳೇ ಅತ್ಯಂತ ಕ್ರೂರವಾಗಿರುತ್ತದೆ. ಇಂತಹ ಅನೇಕವು ಕಥೆಗಳಲ್ಲಿ ಅನಾವರಣಗೊಳ್ಳುತ್ತವೆ.

ಸ್ತ್ರೀಯನ್ನು ಬರೀ ದೇಹವಾಗಿ ನೋಡುವ ನವ್ಯ ಸಂಪ್ರದಾಯವನ್ನು ಒಡೆದು ಸ್ತ್ರೀಯ ಸ್ಥಾನಮಾನಗಳನ್ನು ಕುರಿತ ಮತ್ತು ಅದಕ್ಕಾಗಿ ಹೋರಾಡುವ (ಬಾಹ್ಯವಾಗಿ ಅಲ್ಲದಿದ್ದರೂ ಆಂತರಿಕವಾಗಿ) ಅನೇಕ ಅನಾಮಿಕ ಜೀವಿಗಳ ವ್ಯಕ್ತಿತ್ವ ಸಿರಿಯನ್ನು ಗುರ್ತಿಸುವ ಕಥೆಗಳನ್ನು ಚಿಕ್ಕಣ್ಣನವರ ಕಥೆಗಳಲ್ಲಿ ಕಾಣಬಹುದು. ಇಲ್ಲಿನ ಪಾತ್ರಗಳು ಕೇವಲ ವ್ಯಕ್ತಿ ಚಿತ್ರ ಮಾತ್ರವಾಗದೆ ಪ್ರತಿಯೊಬ್ಬರ ಅನುಭವದ ಪ್ರತಿರೂಪವೂ ಆಗುವಂತಹವು. ಆಧುನಿಕ ಜಗತ್ತಿನ ಯಾಂತ್ರಿಕತೆಯ ಅಬ್ಬರಕ್ಕೆ ಸಿಕ್ಕಿ ತಲ್ಲಣಗೊಳ್ಳುತ್ತಿರುವ ಗ್ರಾಮ ಸಂಸ್ಕೃತಿ ಇವರ ಬಹುತೇಕ ಕಥೆಗಳ ದ್ರವ್ಯ.

ಚಿಕ್ಕಣ್ಣನವರ ಕಥೆಗಳಲ್ಲಿನ ವಸ್ತುಗಳೆಲ್ಲ ನಮಗೆಲ್ಲ ಚಿರಪರಿಚಿತವಾದವುಗಳೇ. ಬಡತನ, ನಿರಕ್ಷರತೆ, ಮೂಢನಂಬಿಕೆಗಳು, ದಾಯಾದಿ ಮಾತ್ಸರ್ಯ, ಕಾಮ, ಅಸೂಯೆ, ಹಾದರ, ತಮಗೆ ದೊರಕದ ಆಕರ್ಷಣೆಗಳ ಸೆಳೆತ, ಜೀತದ ಕಷ್ಟ, ದುಃಖದುಮ್ಮಾನಗಳು, ಸಾಕುಪ್ರಾಣಿಗಳ ಜತೆಗಿನ ಸಂಬಂಧ, ಹದಿಹರೆಯದ ಭಾವನೆಗಳು. ಈ ಅಂಶಗಳು ಇಲ್ಲಿನ ಕಥೆಗಳಲ್ಲಿ ಹಾಸುಹೊಕ್ಕಾಗಿವೆ, ಇವುಗಳು ಕೈಗೂಡದೇ ಹೋದಾಗ ಮೌನವಾದ ಬಂಡಾಯ ।

ಬಂಡಾಯವೆಂದರೆ ಘೋಷಣೆ ಕೂಗುವ, ಫಲಕ ಹಿಡಿಯುವ, ಅದಕ್ಕೂ ಮಿತಿಮೀರಿ ಹೊಡೆದಾಟ, ರಕ್ತಪಾತ ಎಂಬಂತಹ ದೈಹಿಕ ಬಲ ಪ್ರದರ್ಶನವಲ್ಲ. ಬಡತನ ಇದ್ದರೂ, ನೋವಿದ್ದರೂ ಅದನ್ನೇ ಒಪ್ಪಿ ಜೀವನ ಪ್ರೀತಿಯನ್ನು ಬೆಳೆಸಿಕೊಳ್ಳುವುದೂ ಸಹ ಬಂಡಾಯದ ಇನ್ನೊಂದು ಮುಖವೇ ಆಗಿದೆ. ಬಹಿರಂಗವಾಗಿ ಅನ್ಯಾಯದ ವಿರುದ್ಧ ಬಂಡೇಳದಿದ್ದರೂ ಮೌನವಾದ ಪ್ರತಿಭಟನೆ ಇವರ ಕಥೆಗಳಲ್ಲಿ ಕಂಡುಬರುತ್ತದೆ.

ಮೌನವಾದ ಪ್ರತಿಭಟನೆ, ಹತಾಶೆ, ಬಂಡೇಳುವಿಕೆ–ಮುಂತಾದ ಅಂಶಗಳನ್ನೊಳಗೊಂಡೂ ಜೀವನವನ್ನು ಪ್ರೀತಿಸುವ, ಇರುವ ಹಾಗೇ ಸಾಗಿಸುವ ಜೀವನ ಪ್ರೀತಿಯ ಈ ಅಂಶಗಳನ್ನೇ

ಗಮನದಲ್ಲಿರಿಸಿಕೊಂಡ ಪ್ರಸ್ತುತ ಪ್ರಬಂಧ "ಕಾ.ತ.ಚಿಕ್ಕಣ್ಣನವರ ಕಥೆಗಳಲ್ಲಿನ ಸ್ತ್ರೀಪಾತ್ರ ಚಿತ್ರಣ" ಸ್ತ್ರೀ ಸಂವೇದನೆಯ ವಿಮರ್ಶೆಯೂ ಆಗಬಹುದು.

ಚಿಕ್ಕಣ್ಣನವರ ಕಥೆಗಳಲ್ಲಿ ಅನೇಕ ವರ್ಗದ, ವಿಭಿನ್ನ ಮನಸ್ಥಿತಿಯುಳ್ಳ ಮಹಿಳೆಯರು ಕಂಡುಬರುತ್ತಾರೆ. ಹುಚ್ಚಿಯಾಗಿ ಸಮಾಜದಿಂದ ತಿರಸ್ಕೃತಳಾಗಿದ್ದರೂ ತನ್ನ ವಿಶೇಷ ಗುಣದಿಂದ ದೇವಾಲಯವನ್ನೇ ಕಟ್ಟಿಸಿಕೊಳ್ಳುವ ಹೆಂಗಸು, ಗಂಡನನ್ನು ಬಿಟ್ಟು ಇನ್ನೊಬ್ಬನ ಜೊತೆ ಬಂದು ಅವನೂ ಬಿಟ್ಟು ಹೋದ ಮೇಲೆ ಊರಿನವರ ಕುಹಕಕ್ಕೆ, ಅವಮಾನಕ್ಕೆ ಒಳಗಾಗಿದ್ದರೂ ತನ್ನ ವಿಶಾಲ ತಾಯಿ ಹೃದಯದಿಂದ ಊರಿನವರಿಗೆ ಅಚ್ಚುಮೆಚ್ಚಾಗುವ ಹೆಂಗಸು, ತನಗಿರುವ ಒಬ್ಬನೇ ಮಗನ ಪ್ರೀತಿಗೆ ಬೆಲೆಕೊಟ್ಟು ತನ್ನ ಬಗ್ಗೆ ಯೋಚಿಸದೆ, ತನ್ನ ಜೀವದ ಆಸೆಯನ್ನು ತೊರೆದು. ತಾನು ಒಂಟಿಯಾದರೂ ಮಗ–ಸೊಸೆ ಚೆನ್ನಾಗಿರಲೆಂದು ಬಯಸುವ ತಾಯಿ.

ಊರು ಬಿಟ್ಟು ಹೋದ ಗಂಡ ಮತ್ತೆ ಬರುವನೆಂದು ಕಾಯುತ್ತ ಕುಂತ ಹೆಣ್ಣು, ಓಡಿಹೋದ ಗಂಡ ತಾನಾಗೇ ಬರಲೆಂದು ಮಾಟ–ಮಂತ್ರ ಎಂದು ಪೂಜಾರಿಯ ಮೋಹಕ್ಕೆ ಒಳಗಾಗುವ ಹೆಣ್ಣು, ಯಾವುದೋ ಸಣ್ಣ ಮಾತಿಗೆ ಚಿಕ್ಕ ವಯಸ್ಸಿನಲ್ಲಿಯೇ ಮನೆ ಬಿಟ್ಟು ಹೋದ ಮೊಮ್ಮಗನಿಗಾಗಿ ಜೀವವನ್ನು ಕೈಯಲ್ಲಿಡಿದು ಮೊಮ್ಮಗ ಬರುತ್ತಾನೆಂದು ವಯಸ್ಸಾಗಿದ್ದರೂ ಉತ್ಸಾಹದಿಂದಲೇ ಕಾಯುವ ಅಜ್ಜಿ, ಮದುವೆಯ ವಯಸ್ಸು ಮೀರಿದ ಅವಿವಾಹಿತ ಹೆಣ್ಣೊಬ್ಬಳ ಕಾಮನಗಳು, ಸಕಲ ಸಿರಿ ಸಂಪತ್ತಿದ್ದರೂ ಅಂತರಾಳದಲ್ಲಿ ಬಡವಿಯಾದ ಹೆಣ್ಣು, ಗೌಡನ ಹೆಂಡತಿಯಾಗಿ ಅಪಾರ ಗೌರವಕ್ಕೆ ಪಾತ್ರಳಾಗಿದ್ದರೂ ತನ್ನ ಕಾಮತೃಷೆಗಾಗಿ ಮನೆಯಲ್ಲಿನ ಮೇಷ್ಟ್ರನ್ನು ಮೋಸಗೊಳಿಸುವ ಹೆಂಗಸು, ಗಂಡು ಮಗನಂತೆ ಬೆಳೆದು ಈ ವ್ಯವಸ್ಥೆಯ ಪಿತೂರಿಗೆ, ಪ್ರತಿಷ್ಠೆಗೆ ಬಲಿಕೊಡಲೆಂದು ಸಿದ್ಧವಾದ ಹೆಣ್ಣು, ಜಾತಿ ಧರ್ಮಗಳ ಕಟ್ಟುಪಾಡುಗಳನ್ನೇ ಕಿತ್ತೊಗೆದು ಪ್ರೀತಿಸಿದವನನ್ನೇ ಮದುವೆಯಾಗುವ ಹೆಣ್ಣುಗಳು, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ನಲುಗಿದ ಅಸಹಾಯಕ ಹೆಣ್ಣುಗಳು, ಜಾತಿ–ವರ್ಗಗಳ ತಾರತಮ್ಯದಿಂದ ಸಮಾಜದ ಮೂಲಭೂತ ಸೌಕರ್ಯಗಳಿಂದಲೂ ವಂಚಿತರಾದ ಮಹಿಳೆಯರು ಹೀಗೆ ಭಿನ್ನ ಭಿನ್ನ ವಸ್ತುಗಳಿಂದ ಕೂಡಿರುವ ಸಮಾಜದ ಬೇರೆ ಬೇರೆ ಸ್ತ್ರೀಪಾತ್ರಗಳನ್ನು ಚಿಕ್ಕಣ್ಣನವರ ಕಥೆಗಳಲ್ಲಿ ಕಾಣಬಹುದು.

ಚಿಕ್ಕಣ್ಣನವರು ಕಥೆ ಬರೆಯಲು ಆರಂಭಿಸಿದ ಕಾಲ, ಕನ್ನಡದಲ್ಲಿ ನವ್ಯತೆಯ ಚಿಂತನೆಗಳು ಒಂದು ಹಂತದ ಪರಾಕಾಷ್ಠತೆಯನ್ನು ತಲುಪಿ ಆ ಪರಾಕಾಷ್ಠತೆಯ ಬಲೆಯಿಂದ ಬಿಡಿಸಿಕೊಳ್ಳಲೋಸುಗ ಹೊರಳುತ್ತಿದ್ದ ಕಾಲ ಅಂಚಿನಲ್ಲಿದ್ದ ದಲಿತ–ಬಂಡಾಯ ಹುಟ್ಟು ಪಡೆದ ಪ್ರಾರಂಭ ಸಂದರ್ಭದಲ್ಲಿನ ಕಾಲ ಎಂದು ಈಗಾಗಲೇ ಹೇಳಲಾಗಿದೆ. ಹಾಗಾಗಿ ಅವರ ಕಥೆಗಳ

ಒಲವು-ನಿಲುವೂ ಕೂಡ ಬಂಡಾಯ ದಲಿತದ ಉದ್ಘೋಷಿತ ಮೌಲ್ಯಗಳಿಗೆ ಪೂರಕವಾಗಿರುವಂಥದ್ದು. ಅಂತಹ ಬಂಡಾಯ ದಲಿತ ಸಂವೇದನೆಯ ಮೂಲ ಗ್ರಾಮಗಳು ಮತ್ತು ಗ್ರಾಮೀಣ ಬದುಕು.

ಚಿಕ್ಕಣ್ಣನವರು ಮೂಲತಃ ಗ್ರಾಮೀಣ ಸೊಗಡಿನ ಕುಸುಮವಾದ್ದರಿಂದ ಗ್ರಾಮೀಣ ಬದುಕಿನ ನೈಜ ಚಿತ್ರಣವನ್ನು ಅದರಲ್ಲಿ ದಲಿತ-ಸಂವೇದನೆಯನ್ನು ಹಿಡಿಯುವುದರಲ್ಲಿ ಸಫಲರಾಗಿದ್ದಾರೆ. ಗ್ರಾಮೀಣ ಬದುಕಿನ ಅನುಭವಗಳು ಮತ್ತು ಗ್ರಾಮೀಣ ಬದುಕಿನಲ್ಲಿ ಹಾಸುಹೊಕ್ಕಾಗಿರುವ ನಾನಾ ವಿವಿಧ ಭಿನ್ನ ಭಿನ್ನ ಮನೋಭಾವದ ಪಾತ್ರಸ್ತರಗಳು ಕುತೂಹಲಕರವೂ, ಅಚ್ಚರಿದಾಯಕವೂ ಆಗುವಂಥಹವು. ಗ್ರಾಮೀಣ ಬದುಕು ವ್ಯವಸ್ಥೆಯನ್ನು ಪ್ರತಿಬಿಂಬಿಸುವ ಸಾಕ್ಷಿ ಪ್ರಜ್ಞೆಗಳಾಗುವುದರ ಜೊತೆಗೆ, ಸಮಾಜದ ಸ್ಥಿತಿಗತಿಗಳನ್ನು ವಿಡಂಬಿಸುವ, ಪ್ರತಿಭಟಿಸುವ ಬದಲಾಗಬೇಕಾದ ಗೊತ್ತುಗುರಿಯನ್ನು ನಿರ್ದೇಶಿಸುವ ಅಮೂಲ್ಯವಾದ ಕೆಲಸವನ್ನು ಮಾಡುತ್ತಿರುತ್ತವೆ. ಕಾರಣ ಗ್ರಾಮೀಣ ಬದುಕಿನ ಮಾದರಿಗಳು ಬಹುತೇಕವಾಗಿ ಒಂದಲ್ಲ ಒಂದು ರೀತಿಯಲ್ಲಿ ಪ್ರತಿಗಾಮಿತ್ವದಿಂದ ಕೂಡಿದವುಗಳೇ ಆಗಿರುತ್ತವೆ. ಆ ಪರಿಸರದಲ್ಲಿ ರೂಪಗೊಳ್ಳುವ ಅರ್ಥವಿನ್ಯಾಸಗಳು ಕಾಲ ಮತ್ತು ಪರಿಸರದ ಗಡಿರೇಖೆಗಳನ್ನು ಸಮೀಕರಿಸಿಕೊಂಡು ಬಹಳ ಎತ್ತರಕ್ಕೆ ನಿಂತು ಮಾರ್ಗದರ್ಶಕವಾಗುವ ಸಾಧ್ಯತೆಗಳು ಇವೆ. ಬಹಳ ಸಂದರ್ಭದಲ್ಲಿ ನಾವೀನ್ಯತೆಗೆ ಸಾಕ್ಷಿಯಾಗಿಯೂ ಇರುತ್ತವೆ. ಹಾಗಾಗಿ ಚಿಕ್ಕಣ್ಣನವರ ಕಥೆಗಳು ಆತ್ಮಾವಲೋಕನ ಮಾಡಿಕೊಳ್ಳುವಂತಹ ಕಥೆಗಳು ಎನ್ನಬಹುದು.

ಗ್ರಾಮೀಣ ಮಹಿಳೆಯರ ಅಂತರ್ಮುಖತೆ, ಆತ್ಮಪ್ರಜ್ಞೆ, ದ್ವಂದಗಳ ಅರಿವನ್ನು ಚಿಕ್ಕಣ್ಣನವರ ಕತೆಗಳಲ್ಲಿ ಗುರುತಿಸಬಹುದು. ಇಲ್ಲಿನ ಮಹಿಳೆಯರ ಕಥೆಗಳು ಕೇವಲ ಮನೋರಂಜನೆಯಲ್ಲದೆ, ಕೇವಲ ಸಾಮಾಜಿಕ ಜಾಗೃತಿಯೂ ಅಲ್ಲದ ಬದುಕಿನ ಸತ್ಯದ ಅನಾವರಣವಾಗಿದೆ.

ಮೇಲು ನೋಟಕ್ಕೆ ಸಮಾಜದಿಂದ ಭಿನ್ನವಾಗಿರುವಂತೆ ಲೆಕ್ಕಕ್ಕೆ ಬಾರದವರಂತೆ ಕಂಡರೂ ಹೇಗೆ ಅವರು ಸಾಮಾಜಕ್ಕೊಂದು ಸಂಪತ್ತು ಎಂಬುದನ್ನು ತಿಳಿಸುವ ಪ್ರಯತ್ನ ನಡೆದಿದೆಲ. ಒಡಲಿನಲ್ಲಿ ಬೆಂಕಿಯ ಹಾಗೆ ಸುಡುವ ನೋವಿದ್ದರೂ, ಅದನ್ನು ಸಹಿಸುತ್ತಲೇ ಜೀವನ ಸಾಗಿಸುತ್ತಾ ಮುಂದೊಂದು ನೆಮ್ಮದಿಯ ದಿನಕ್ಕಾಗಿ ಉತ್ಸಾಹದಿಂದಲೇ ಕಾಯುವಂತಹ ಪಾತ್ರಗಳ ನೋವು, ಅಂತಹ ನೋವಿನಲ್ಲೂ ಪುರುಷ ಪ್ರಧಾನ ವ್ಯವಸ್ಥೆ ಹಾಕುವ ಬರೆಗಳು, ಆ ಬರೆಗಳ ನೋವನ್ನು ತಿಂದು ಚಿನ್ನದಂತೆ ಹೊಳೆಯುವ ಪಾತ್ರಗಳನ್ನು ಪರಿಚಯಿಸಲಾಗಿದೆ.

ಸ್ತ್ರೀಯೊಬ್ಬಳು ಶ್ರೀಮಂತಿಕೆಯ ಸುಪ್ಪತ್ತಿಗೆಯಲ್ಲಿ ನೆಮ್ಮದಿ ಕಾಣದೆ ಒಂಟಿತನವನ್ನು ಎದುರಿಸುತ್ತಾಳೆ, ಕೆಲವೊಮ್ಮೆ ಒಂಟಿತನ ತನ್ನಿಂದ ಎಂತಹ ತಪ್ಪನ್ನೆಲ್ಲ ಮಾಡಿಸುತ್ತದೆ ಎನ್ನುವ ಚಿತ್ರಣವೂ ಇದೆ. ಜೊತೆಗೆ ಸಮಾಜದ ಬೇರುಗಳಾದ ವೃದ್ಧ ಮಹಿಳೆಯರೂ ಸಹ ಹೇಗೆ ಸಮಾಜಕ್ಕೊಂದು ಆದರ್ಶಮಯಿಗಳು, ಬದುಕನ್ನು ಕಟ್ಟುವ ಕ್ರಿಯೆಯಲ್ಲಿ ಹೇಗೆ ಭಾಗಿಗಳಾಗುತ್ತಾರೆ ಎಂಬುದನ್ನು ಗಮನಿಸಬಹುದು.

**ಕಾ.ತ. ಚಿಕ್ಕಣ್ಣನವರ ಪರಿಚಯ:**

ಆಧುನಿಕ ಕನ್ನಡ ಸಾಹಿತ್ಯದ ಸಣ್ಣಕಥೆ ಮತ್ತು ಕಾದಂಬರಿಯ ಮಹಾ ಸಾಗರಕ್ಕೆ ಅಪೂರ್ವ ಸೇವೆ ಸಲ್ಲಿಸಿದವರಲ್ಲಿ ಕಾ.ತ. ಚಿಕ್ಕಣ್ಣನವರೂ ಒಬ್ಬರು. ಮೈಸೂರು ಜಿಲ್ಲೆಯ ಕೆ.ಆರ್.ನಗರ ತಾಲ್ಲೂಕಿನ ಕಾಳಮ್ಮನ ಕೊಪ್ಪಲು ಎಂಬ ಗ್ರಾಮದಲ್ಲಿ ಕ್ರಿ.ಶ.೧೯೫೨, ಮೇ ೨೦ ರಂದು ಜನಿಸಿದ ಇವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಎಂ.ಎ. ಪದವಿಯನ್ನು ಪಡೆದಿದ್ದಾರೆ. ಇವರು ಹೊಸಗನ್ನಡ ಸಾಹಿತ್ಯದ ನವ್ಯ ಕಾಲದವರಾದರೂ ಕನ್ನಡ ಸಾಹಿತ್ಯ ನವ್ಯದಿಂದ ಬಂಡಾಯದ ಕಡೆಗೆ ಹೊರಳುತ್ತಿದ್ದ ಸಂಕ್ರಮಣ ಕಾಲ. ಆದ್ದರಿಂದ ಇವರ ಪ್ರಾರಂಭದ ಕಥೆಗಳು ನವ್ಯ ಧೋರಣೆಯನ್ನು ಒಳಗೊಂಡಿದ್ದರೆ, ನಂತರದ ಕಥೆಗಳಲ್ಲಿ ಬಂಡಾಯದ ಅಂಶಗಳನ್ನು ಕಾಣಬಹುದು.

ಇವರ ಕನ್ನಡ ಸೇವೆ ಅಪಾರವಾದುದು. ಇವರ ಪ್ರಮುಖ ಪ್ರಕಟಣೆಗಳು

**ಕಥಾಸಂಕಲನಗಳು**

೧) ಬಿಳಲು ಬಿಟ್ಟ ಬದುಕು (೧೯೭೯)
೨) ಒಡಲುರಿ (೧೯೮೪)
೩) ವಾಸನಾಮಯ ಬದುಕಿನ ಆಚೆ ಈಚೆ (೧೯೮೮)
೪) ಮನಸು ಮುಗಿಲು (೧೯೯೩),
೫) ಅಗಾಂತರ (೨೦೦೩),
೬) ಕಂಡೇರಿ (ಸಮಗ್ರ ಕತೆಗಳು ೨೦೦೪)

**ಕಾದಂಬರಿಗಳು**

೧) ಮುಂಜಾವು (೧೯೮೯),
೨) ದಂಡೆ (೧೯೯೯)

**ನಾಟಕ**

೧) ವಧೂಟಿ

**ಪ್ರಬಂಧ ಸಂಕಲನ**

೧) ಬಳ್ಳಿಸಾಲು

**ಕವನ ಸಂಕಲನ**

ಗೊಂಚಲು

**ಬಾಲ ಸಾಹಿತ್ಯ**

೧) ಕನಕದಾಸರು

**ಸಂಪಾದನ ಕೃತಿಗಳು**

೧) ಕನಕ ಕಿರಣ
೨) ಬಂದಿವೆ ಕೇರಿಗೆ
೩) ಪ್ರೈಸ್‌ಲೆಸ್ ಗೋಲ್ಡ್
೪) ನಯಸೇನ ಹೊನ್ನಾರು
೫) ಮೈತ್ರಿ, ಮುಂತಾದಗಳನ್ನು ಬರೆದಿದ್ದಾರೆ.

ಇವರ 'ಬಿಳಲು ಬಿಟ್ಟ ಬದುಕು' ಕಥಾಸಂಕಲನಕ್ಕೆ ದೇವರಾಜ ಬಹದ್ದೂರ್ ಬಹುಮಾನ, 'ಮುಂಜಾವು' ಕಾದಂಬರಿಗೆ ಕರ್ನಾಟಕ ಸಾಹಿತ್ಯ ಅಕಾಡಮಿ ಬಹುಮಾನ, 'ದಂಡೆ' ಕಾದಂಬರಿಗೆ ವರ್ಧಮಾನ ಪ್ರಶಸ್ತಿ, 'ವಧೂಟಿ' ನಾಟಕಕ್ಕೆ ಆರ್ಯಭಟ ಪ್ರಶಸ್ತಿ ದೊರೆತಿದೆ.

ಇವರ 'ಒಡಲುರಿ', 'ಹುಚ್ಚೀರಿಯ ಎಸರಿನ ಪ್ರಸಂಗ', 'ಆಯಾಮ', 'ಕೊಂಡಿಮುಳ್ಳುಗಳು' ಎಂಬ ಕಥೆಗಳು, 'ದಂಡೆ' ಕಾದಂಬರಿ ನಾಟಕ ಕೃತಿಗಳಾಗಿ ಅನೇಕ ಪ್ರದರ್ಶನಗಳನ್ನು ಕಂಡಿವೆ. ಇಷ್ಟೇ ಅಲ್ಲದೆ ಚಿಕ್ಕಣ್ಣನವರು ಆಕಾಶವಾಣಿ, ದೂರದರ್ಶನಗಳಲ್ಲೂ ಸೇವೆ ಸಲ್ಲಿಸಿದ್ದಾರೆ. ಅನೇಕ ರೂಪಕಗಳ ನಿರ್ದೇಶನ, ಅನೇಕ ಧಾರಾವಾಹಿಗಳಿಗೆ ಸಂಭಾಷಣೆ, ಮತ್ತು ಹಾಡುಗಳಿಗೆ ಸಾಹಿತ್ಯ ರಚನೆಯನ್ನು ಮಾಡಿದ್ದಾರೆ. 'ಬೆಳ್ಳಕ್ಕಿ ಸಾಲು', 'ಕನಸು ಚೆಲ್ಲಾವ', 'ಇದೇನೇ ಸಖಿ' ಎಂಬ ಧ್ವನಿ ಸುರುಳಿಗಳನ್ನು ಬಿಡುಗಡೆ ಮಾಡಿದ್ದಾರೆ. ಇವರ ಅನೇಕ ಕಥೆಗಳು ಉರ್ದು ಹಾಗೂ ಇಂಗ್ಲೀಷ್ ಭಾಷೆಗೂ ಅನುವಾದಗೊಂಡಿವೆ.

ಇವರ ಕಾದಂಬರಿಗಳಾದ 'ಮುಂಜಾವು' ಮತ್ತು 'ದಂಡೆ' ಗ್ರಾಮೀಣ ಸೊಗಡುಳ್ಳ ಗ್ರಾಮೀಣ ಸಂವೇದನೆಯುಳ್ಳ ಕಾದಂಬರಿಗಳಾಗಿ ಬಹು ಜನರ ಮೆಚ್ಚುಗೆಯನ್ನು ಗಳಿಸಿಕೊಂಡಿವೆ. ಈಗ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಜಂಟಿ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಕಾರ್ಯಭಾರದ ನಡುವೆಯೂ ಸಾಹಿತ್ಯಾಭಿರುಚಿಯನ್ನು ಬೆಳೆಸಿಕೊಂಡು ಮೌಲ್ಯಯುತವಾದ ಕಾಣಿಕೆಯನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ.

# ಅಡಿ ಟಿಪ್ಪಣಿ

೧. ಕನ್ನಡದ ಸಣ್ಣಕಥೆಗಳು : ಜಿ.ಎಸ್. ನಾಯಕ್, ಅಂತರಭಾರತೀಯ ಪುಸ್ತಕ ಮಾಲೆ ಪುಟ–೮೭

೨. ದುರ್ಗಸಿಂಹನ ಪಂಚತಂತ್ರದ ಸಮೀಕ್ಷೆ : ವರದಜಾ ಹುಯಿಲಗೊಳ, ಸಾಹಿತ್ಯ ಭಂಡಾರ, ಪುಟ–೫೩

೩. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿ : ಡಾ. ಪ್ರೀತೀ ಶುಭಚಂದ್ರ, ಪುಟ–೨೯.

# ಅಧ್ಯಾಯ – ೨

## ಪ್ರಕೃತಿ–ಸಂಸ್ಕೃತಿ ಮತ್ತು ಮಹಿಳೆ

ಪ್ರಕೃತಿ ಮತ್ತು ಮನುಷ್ಯನ ಸಂಬಂಧ ಇಂದು ನೆನ್ನೆಯದಲ್ಲ. ಪ್ರಕೃತಿಯ ಒಂದಂಶವಾಗಿರುವ ಮಾನವ ತನ್ನ ಸೃಷ್ಟಿಯ ಆದಿಯಿಂದಲೂ ಪ್ರಕೃತಿಯೊಂದಿಗೆ ನಿಕಟ ಸಂಬಂಧವನ್ನು ಇಟ್ಟಿಕೊಂಡೇ ಬಂದಿದ್ದಾನೆ. ಪ್ರಕೃತಿಯ ಒಡನಾಟವಿಲ್ಲದೇ ಮನುಷ್ಯ ಬದುಕಲು ಸಾಧ್ಯವೇ ಇಲ್ಲ. ಇದರ ಅರಿವಿದ್ದರೂ ಸಹ ಇಂದು ಮಾನವ ನಾಗರೀಕತೆ ಮತ್ತು ಅಭಿವೃದ್ಧಿಯ ಹೆಸರಿನಲ್ಲಿ ಪ್ರಕೃತಿಯನ್ನು ಹಿಮ್ಮೆಟ್ಟಿ ಸಾಗುತ್ತಿರುವ ಭ್ರಮೆಯಲ್ಲಿದ್ದಾನೆ. ಪ್ರಕೃತಿಯ ಮುಖೇನ ಸಂಸ್ಕೃತಿಯನ್ನು ಕಟ್ಟಿ ಬೆಳೆಸಿದ ಮಾನವ ಇಂದು ಅವೆರಡನ್ನು ತನ್ನ ಸ್ವಾರ್ಥ ಸಾಧನಗಳನ್ನಾಗಿ ಮಾಡಿಕೊಂಡಿದ್ದಾನೆ. 'ಸಂಸ್ಕೃತಿ' ಎಂಬ ಅಧಿಕಾರದ ಹೆಸರಿನಲ್ಲಿ ಪ್ರಕೃತಿಯ ಮೇಲೆ ದೌರ್ಜನ್ಯವೆಸಗುತ್ತಿದ್ದಾನೆ.

ಸೃಷ್ಟಿಯಲ್ಲಿ ಪ್ರಕೃತಿ ಮೊದಲು ನಂತರದ ಸ್ಥಾನ ಸಂಸ್ಕೃತಿಗೆ ಅನಂತರದ ಸ್ಥಾನ ಮಾನವನಿಗೆ. ಆದರೆ ಈ ಕ್ರಮಣಿಕೆ ತಪ್ಪಿ ಮನುಷ್ಯನೇ ಮೊದಲಾಗಿ ಉಳಿದೆರಡನ್ನು ತನ್ನ ಸಾಧನೆಯ ಮೆಟ್ಟಿಲನ್ನಾಗಿ ಮಾಡಿಕೊಂಡು ಸದಾ ತುಳಿಯುತ್ತಲೇ ಮುನ್ನಡೆಯುತ್ತಿದ್ದಾನೆ. ಪ್ರಕೃತಿಯ ಒಂದಂಶವಾದ ಮಾನವ ತಾನೇ ಸೃಷ್ಟಿಸಿದ ಸಂಸ್ಕೃತಿಯ ಹೆಸರಿನಲ್ಲಿ ಪ್ರಕೃತಿಯನ್ನೇ ಧಿಕ್ಕರಿಸುವ ಮಟ್ಟಕ್ಕೇರಿದ್ದಾನೆ.

ಮಾನವ ಕುಲವನ್ನು ಕಾಯ್ದಿಟ್ಟುಕೊಂಡು ಬಂದ ಅಂಶಗಳೆಂದರೆ ಪ್ರಕೃತಿ, ಸಂಸ್ಕೃತಿ ಮತ್ತು ಮಹಿಳೆ. ಈ ಮೂರು ಮನುಷ್ಯನ ಸೃಷ್ಟಿಯಿಂದ ಹಿಡಿದು ಅತ್ಯಂತ ಎತ್ತರಕ್ಕೆ ಕರೆದೊಯ್ದು ನಿಲ್ಲಿಸುವಂತಹವು. ಕೋಳಿ ಮರಿಯನ್ನು ಜೋಪಾನ ಮಾಡುವಂತೆ ರೆಪ್ಪೆ ಕಣ್ಣನ್ನು ಜೋಪಾನ ಮಾಡುವಂತೆ ಈ ಮೂರು ಮನುಷ್ಯನನ್ನು ರಕ್ಷಿಸಿ ಕಾಪಾಡಿಕೊಂಡು ಬಂದಿವೆ.

ಆದರೆ, ಇಂದು ಮನುಷ್ಯ ನಾಗರೀಕತೆಯ ಹೆಸರಿನಲ್ಲಿ ಪ್ರಕೃತಿಯಲ್ಲಿಯೇ ತಲ್ಲಣಗಳನ್ನು ಸೃಷ್ಟಿಸಿ ಅದರೊಂದಿಗೇ ಸಂಘರ್ಷಕ್ಕೆ ಇಳಿದು ದಾಳಿಕೋರತನದಿಂದ, ಪ್ರಕೃತಿಯ ಸಂಪತ್ತನ್ನೆಲ್ಲ ದೋಚೀ ದೋಚೀ, ಪುನರ್ ಸೃಷ್ಟಿಸಬಲ್ಲ ಸಂಪತ್ತನ್ನು ನಾಶಮಾಡುವ ಹಂತಕ್ಕೆ ತಲುಪಿದ್ದಾನೆ; ಪ್ರಕೃತಿಯನ್ನೇ ಧಿಕ್ಕರಿಸುವ ಮಟ್ಟಕ್ಕೇರಿದ್ದಾನೆ. ಪ್ರಕೃತಿಯ ಪಶು–ಪಕ್ಷಿ, ಕ್ರಿಮಿ–ಕೀಟಗಲ್ಲಿ, ಕಾಡುಪ್ರಾಣಿಗಳಲ್ಲೂ, ಅಷ್ಟೇ ಅಲ್ಲ ಸಸ್ಯ–ಸಸ್ಯಗಳಲ್ಲೂ ಒಂದು ರೀತಿಯ ಸಂಬಂಧವಿದೆ. ಆ ಸಂಬಂಧವೇ ಮನುಷ್ಯನಲ್ಲೂ ಇರಬೇಕಾದುದು. ಆದರೆ ಆರ್ಥಿಕ ಮತ್ತು ಸಾಮಾಜಿಕ

ಪರಿಸ್ಥಿತಿಗಳು ಮನುಷ್ಯ ಸಂಬಂಧಗಳನ್ನು ಇಷ್ಟೇ ಎಂದು ನಿರ್ಧರಿಸಿಬಿಡುವಂತಹ ಸನ್ನಿವೇಶಗಳನ್ನು ಕೆಲವು ಪಟ್ಟಭದ್ರ ಹಿತಾಸಕ್ತಿಗಳು ನಿರ್ಮಾಣ ಮಾಡುವುದರಿಂದ ಮಾನವ ಸಂಬಂಧಗಳಲ್ಲಿ ತರತಮಭಾವನೆ ಉಂಟಾಗಿದೆ.

ಮನುಷ್ಯ ಸಂಬಂಧಗಳು ಎಷ್ಟೊಂದು ಹದಗೆಟ್ಟಿವೆಯೆಂದರೆ ಊಳಿಗಮಾನ್ಯ ವ್ಯವಸ್ಥೆಯಲ್ಲಿದ್ದ ಒಡೆಯ ಮತ್ತು ಆಳು ಇವರ ಮಧ್ಯೆ ಇದ್ದಂತಹ ಸಂಬಂಧಕ್ಕಿಂತಲೂ ಭೀಕರವಾದದ್ದಾಗಿದೆ. ವೈಯಕ್ತಿಕ ಸ್ವಾರ್ಥ, ಲೋಭಗಳು, ಧಾರ್ಮಿಕ ಭೀತಿ, ಅಂಧ ವಿಶ್ವಾಸ ಇತ್ಯಾದಿಗಳು ಬಂಧು-ಬಳಗದವರನ್ನೇ ಶೋಷಣೆ ಮಾಡುವ ಮಟ್ಟಕ್ಕೆ ಕೊಂಡೊಯ್ದಿವೆ. ಇಂದು ಆರ್ಥಿಕ ಸ್ಥಿತಿಗತಿಗಳು ಮಾನವನ ಬದುಕಿನಲ್ಲಿ ಪ್ರಧಾನ ಪಾತ್ರ ವಹಿಸುತ್ತಿರುವುದರಿಂದ ಮಾನವ ಸಂಬಂಧಗಳನ್ನೂ ಸಹ ಆರ್ಥಿಕ ಸ್ಥಿತಿಗತಿಗಳೇ ನಿರ್ಧರಿಸುವಂತಹ ಸ್ಥಿತಿ ಏರ್ಪಟ್ಟಿದೆ. ಅಷ್ಟೇ ಅಲ್ಲ ಮಾನವ ಸಂಬಂಧಗಳ ಸ್ವರೂಪವೇ ಮುಕ್ತ ಮಾರುಕಟ್ಟೆಯ ಸ್ವರೂಪದ್ದಾಗಿ ಮನುಷ್ಯತ್ವಕ್ಕೆ ಬೆಲೆಯೇ ಇಲ್ಲವಾಗಿಬಿಟ್ಟಿದೆ.

ಇನ್ನು 'ಸಂಸ್ಕೃತಿ' ಎಂದರಂತೂ ನಾಗರೀಕತೆಯಿಂದ ಪ್ರಭಾವಕ್ಕೊಳಪಟ್ಟ ಆಚಾರ-ವಿಚಾರ, ಹಬ್ಬ-ಆಚರಣೆಗಳಿಗೇ ಮೀಸಲಾಗಿಬಿಟ್ಟಿದೆ. ಸಂಸ್ಕೃತಿ ಎನ್ನುವಂತಹದ್ದು ಮನುಷ್ಯನ ಸೃಷ್ಟಿಯೇ ಆದರೂ ಪ್ರಕೃತಿಯ ಮೂಲ ನಿಯಮಗಳನ್ನು ಮೀರುವಂತಹದ್ದಾಗಿರಬಾರದು. ಅಂದರೆ ಮನುಷ್ಯ ಮತ್ತು ಸಂಸ್ಕೃತಿಗಳೆರಡೂ ಪ್ರಕೃತಿಯ ಭಾಗವೇ ಆಗಿರುವುದರಿಂದ ಪ್ರಕೃತಿಯನ್ನು ಮೀರುವ ಅಥವಾ ತಿರುಚುವ ಕಾರ್ಯವನ್ನು ಇಂದು ಮನುಷ್ಯ ಸಂಸ್ಕೃತಿಯ ಹೆಸರಿನಲ್ಲಿ, ಸಂಸ್ಕೃತಿಯನ್ನು ನಾಗರೀಕತೆ ಎಂದು ಕರೆದುಕೊಳ್ಳುತ್ತಾ ಪ್ರಕೃತಿ ಮತ್ತು ಸಂಸ್ಕೃತಿ ಎರಡನ್ನೂ ನಾಶಮಾಡುತ್ತಿದ್ದಾನೆ. ಇನ್ನೂ ವಿವರಿಸಬೇಕೆಂದರೆ, ಹೂವು ಎನ್ನುವಂತಹದ್ದು ಪ್ರಕೃತಿದತ್ತವಾದದ್ದು, ಸಂಸ್ಕೃತಿ, ಆದರೆ ಹೂವಿನ ಪರಿಮಳ ನಾಗರೀಕತೆಯಂತೆ. ಹೂವಿಗೆ-ಅದು ಅತ್ಯಂತ ಪ್ರಭಾವೀ ರೀತಿ ಪರಿಮಳಭರಿತವಾಗಿಸಲು ರಾಸಾಯನಿಕ ಗೊಬ್ಬರಗಳನ್ನು ಬಳಸುವಂತೆ, ಮೂಲ ಸಂಸ್ಕೃತಿಯನ್ನು ವೈಭವೀಕರಿಸುವ, ಉದ್ದೀಪನಗೊಳಿಸುವುದು ನಾಗರೀಕತೆ ಎನಿಸಿಕೊಳ್ಳುತ್ತವೆ.

ಅಂತಹ ನಾಗರೀಕತೆಯು ಬೆಳೆದಂತೆ ಮನುಷ್ಯನ ಜನಜೀವನ ಸಂಸ್ಕೃತಿಗಳು ವಿಕಾಸ ಹೊಂದುತ್ತಾ ಹೋದಂತೆ ಅವುಗಳು ಮನುಷ್ಯನ ಮನೋಧರ್ಮದ ಮೇಲೆ ಬೀರುವಂತಹ ಪರಿಣಾಮ ವಿಭಿನ್ನವಾಗಿರುತ್ತದೆ. ಹಾಗೆಯೇ ವಿಭಿನ್ನವಾಗಿದೆ ಕೂಡ.

ಈ ಭೂಮಿ ಮೇಲೆ ಗಾಳಿ, ನೀರು, ಬೆಳಕು ಇತರೆ ಪ್ರಾಣಿ ಪಕ್ಷಿಗಳಂತೆ ಮನುಷ್ಯನೂ ಒಬ್ಬ. ಅವನೇನು ಭೂಮಿಗೆ ಒಡೆಯನಲ್ಲ. ಆದರೆ ಇತ್ತೀಚೆಗೆ ಅವನು ಭೂಮಿಯ, ಪ್ರಕೃತಿಯ ಕರುಳುಬಳ್ಳಿ ಸಂಬಂಧವನ್ನೇ ಕತ್ತರಿಸಿಕೊಂಡು ಮೇಲೇರುತ್ತಾ ಭೂಮಿಗಿಂತ ದೊಡ್ಡವನೆಂಬಂತೆ ಬೀಗುತ್ತಿದ್ದಾನೆ. ಭೂಮಿಯನ್ನೊಳಗೊಂಡ ಮನುಷ್ಯ ಪ್ರಕೃತಿಯ ಸಕಲ ಸೊತ್ತು ತನ್ನ ಭೋಗಕ್ಕಾಗಿಯೇ ಎಂದು ನಿಶ್ಚಯಿಸಿಕೊಂಡಂತಿದೆ. ಪ್ರಕೃತಿ ತನ್ನೆಲ್ಲಾ ಬೇಡಿಕೆಯನ್ನು ಪೂರೈಸಬೇಕೆಂದು ಹಠ ಹಿಡಿದಂತಿದೆ. ಪ್ರಕೃತಿಯ ಪ್ರತೀಕದಂತಿರುವ ಹೆಣ್ಣನ್ನು ಸಹ ದಿಕ್ಕರಿಸಿ ನಡೆಯುತ್ತಿರುವುದು ಸರ್ವೇ ಸಾಮಾನ್ಯದ ವಿಷಯವಾಗಿಬಿಟ್ಟಿದೆ. ವಿಪರ್ಯಾಸವೆಂದರೆ ಹೆಣ್ಣನ್ನು ಲೆಕ್ಕಿಸದೇ ಇರುವ ಪ್ರಕ್ರಿಯೆಯೇ ಹೆಣ್ಣನ್ನು ಮತ್ತಷ್ಟು ಸಬಲವನ್ನಾಗಿಸುವ ಅಂಶವಾಗಿದೆ ಎನ್ನಬಹುದು.

ಅಂತಹ ಪ್ರಕೃತಿ ಮತ್ತು ಮಹಿಳೆಯ ನಡುವೆ ಅಭೂತಪೂರ್ವ ಬೆಸುಗೆಯ ರೀತಿಯಲ್ಲಿರುವುದು ಸಂಸ್ಕೃತಿ. ಮಾನವೀಯ ಅವಸ್ಥೆಯ ಮೂಲಭೂತ ದ್ವಂದ್ವಗಳಲ್ಲಿ ಬಹಳ ಮುಖ್ಯವಾದದ್ದು ಪ್ರಕೃತಿ ಮತ್ತು ಸಂಸ್ಕೃತಿಗಳ ಸಂಬಂಧ. ಪ್ರಕೃತಿ ಮತ್ತು ಸಂಸ್ಕೃತಿಯ ಸಂಘರ್ಷವೇ ಒಂದು ಕಥೆಯ ಮುಖ್ಯ ಭೂಮಿಕೆ. ಪ್ರಕೃತಿ ಮತ್ತು ಸಂಸ್ಕೃತಿಯ ನಡುವೆ ಜೀವಿಸುವ ಮನುಷ್ಯನ ಬದುಕು ಸಂಸ್ಕೃತಿಗಿಂತ ಪ್ರಕೃತಿಯ ಜೊತೆಗೆ ಅಗೋಚರತೆಯಿಂದ ನಂಟನ್ನು ಹೊಂದಿರುತ್ತದೆ. ಸಂಸ್ಕೃತಿಯ ಸ್ಥೂಲ ನಿಯಂತ್ರಣದಿಂದ ಪಾರಾಗಬಯಸುವ ಮನುಷ್ಯ ಚೇತನವು ಪ್ರಕೃತಿಯಲ್ಲಿ ಸ್ಥಾನ ಹುಡುಕುವುದು ಸಹಜ ಎನ್ನಬಹುದು.

ಪ್ರಖ್ಯಾತ ನಾಣ್ಣುಡಿಯಂತೆ:– "ವಿಚಾರಕ್ಕೆ ಮೂಲ ಪ್ರಕೃತಿ ಸಂಸಾರಕ್ಕೆ ಮೂಲ ಸ್ತ್ರೀ" ಎನ್ನುವ ಹಾಗೆ ಸಂಸ್ಕೃತಿಯ ಕರ್ತೃ ಹೆಣ್ಣು. ಸಂಸ್ಕೃತಿಯನ್ನು ಕಟ್ಟುವ, ಬೆಳೆಸುವ, ಕಾಪಾಡಿಕೊಂಡು ಬರುವವಳು ಸ್ತ್ರೀ. ಹಾಗೆಯೇ ಪ್ರಕೃತಿಯನ್ನು ಸ್ತ್ರೀ ರೂಪವಾಗಿಯೇ ನೋಡಲಾಗುತ್ತದೆ. ಇವತ್ತಿನ ಸಂದರ್ಭದಲ್ಲಿ ಸ್ತ್ರೀ ಮತ್ತು ಸಂಸ್ಕೃತಿಯನ್ನು ಮೂಲ ಬೇರು ಎನ್ನುವುದಾದರೆ ಈ ಎರಡಕ್ಕೂ ಜೀವನಾಧಾರವಾದ ಪ್ರಕೃತಿಯನ್ನು ಭೋಗಿಸುತ್ತಿರುವ ಮನುಷ್ಯ ಸ್ತ್ರೀಯನ್ನು ಹಾಗೇ ಭೋಗಿಸುತ್ತಿದ್ದಾನೆ. ಆದರೂ ಪ್ರಕೃತಿ ಮತ್ತು ಸಂಸ್ಕೃತಿಯ ಪ್ರತೀಕವಾಗಿ ಸ್ತ್ರೀ ತನ್ನತನವನ್ನು ಮೆರೆಯುತ್ತಿರುವುದು ಸತ್ಯದ ವಿಷಯ. ಇಂತಹ ಪ್ರಕೃತಿ ಮತ್ತು ಸಂಸ್ಕೃತಿಗಳ ಪ್ರತೀಕದಂತೆ ಪಾತ್ರಗಳನ್ನು ಕಾ.ತ.ಚಿಕ್ಕಣ್ಣನವರ 'ಕಂಡೇರಿ' ಕಥಾ ಸಂಕಲನದಲ್ಲಿ ಕಾಣಬಹುದು.

ಇವರ ಬಹಳಷ್ಟು ಕಥೆಗಳಲ್ಲಿ ಬಡತನ, ಅಜ್ಞಾನ, ಕತ್ತಲು ಮತ್ತು ಶೋಷಣೆಗಳೇ ಹಾಸುಹೊಕ್ಕಾಗಿರುವ ಪ್ರಪಂಚ, ದಮನಿತರ ಪ್ರಪಂಚ, ಮೇಲ್ಜಾತಿ ಮತ್ತು ಮೇಲ್ವರ್ಗದವರಿಂದ

ಶೋಷಿಸಲ್ಪಡುವ ಕೆಳಜಾತಿ, ಕೆಳವರ್ಗದವರ ಬದುಕಿನ ವಾಸ್ತವವು ಸಂಕೀರ್ಣ ರಿ ಚಿತ್ರಿತವಾಗಿದೆ. ಅಂದರೆ ಅವರ ಕಥೆಗಳಲ್ಲಿನ ಸ್ತ್ರೀ ಬದುಕು ಸಹಾನುಭೂತಿ ಕೂಡಿರುವಂತಹದ್ದಲ್ಲ. ಅಳುಬರುಕುತನದ್ದಲ್ಲ. ಬದಲಾಗಿ ಕಷ್ಟಗಳ ನಡುವೆಯೂ ಬದುಕುಳಿಯುವ, ತನ್ಮೂಲಕ ಮೌನವಾಗಿ ವ್ಯವಸ್ಥೆಯನ್ನು ಪ್ರತಿಭಟಿಸುವ ಮಾನವ ಚೇತನವನ್ನು ಹುಡುಕುವಂತಹ ಚಿತ್ರಣಗಳು.

ಚಿಕ್ಕಣ್ಣನವರ ಬಹುತೇಕ ಕತೆಗಳಲ್ಲಿ ಬದುಕಿಗೆ ಹೆದರಿ ಓಡುವ, ಸಾಯುವ ಚಿಂತೆ ಮಾಡುವ, ವಿರಕ್ತಿಯ ಮುಸುಕಿನಲ್ಲಿ ಅಲೆಯುವ, ವಿಲಾಸದಲ್ಲಿ ಕರ್ತವ್ಯವನ್ನು ಮರೆಯುವ ಗಂಡಸೇ ಹೆಚ್ಚಾಗಿ ಕಂಡುಬರುತ್ತಾರ. ಇದಕ್ಕೆ ಸಂಪೂರ್ಣ ವಿರುದ್ಧವಾಗಿ ಇಲ್ಲಿನ ಮಹಿಳೆಯರು ಕಂಡುಬರುತ್ತಾನೆ. ಜೀವನಾನುಭವಕ್ಕೆ ಎದುರಾಗಿ ಜೀವನವನ್ನು ಎದುರಿಸುವ ಸ್ಥೈರ್ಯ ಹೊಂದಿರುವಂತಹ ಸ್ತ್ರೀಯರನ್ನು ಕಾಣಬಹುದು. ಪ್ರಕೃತಿ ಮತ್ತು ಸಂಸ್ಕೃತಿಗಳ ಜವಾಬ್ದಾರಿಗಳನ್ನು ತಮ್ಮ ಎಂಥಹ ಸ್ಥಿತಿಯಲ್ಲಿಯೂ ಪೂರೈಸುವ, ನಿರ್ವಹಿಸುವ ಸತ್ಯವತಿ, ಕರಗವ್ವ, 'ದೊರೆ' ಕಥೆಯ ಗೀತ, ಕವಳದ ನರಸಪ್ಪನ ಹೆಂಡತಿ, 'ಜಪದಕಟ್ಟೆ'ಯ ರುಕ್ಮಿಣಿ. ಪ್ರಕೃತಿ ಮತ್ತು ಸಂಸ್ಕೃತಿಗಳ ಹರಿಕಾರರಾಗಿ ಕಾಣುತ್ತಾರೆ.

'ಸತ್ಯವತಿ' ಕಥೆಯ ಸತ್ಯವತಿಯೂ ದಿಕ್ಕುದೆಸೆಯಿಲ್ಲದವಳು, ನೋಡುವುದಕ್ಕೆ ಹುಚ್ಚಿಯಂತೆ ಕಾಣುತ್ತಾಳಾದರೂ ಇಡೀ ಊರಿಗೇ ನೈತಿಕ ಅಂಕುಶ ಹಿಡಿದು ಊರನ್ನು ತಿದ್ದುವ ಕೆಲಸ ಮಾಡುತ್ತಿರುತ್ತಾಳೆ. "ಜೋರು ಜೂರತ್ತಿನಲ್ಲೇ ಮನಸ್ಸು ಬೆಸೆವ ಮಾಯಗಾತಿಯಾಗಿರುತ್ತಾಳೆ".[೧] ನೋಡುವುದಕ್ಕೆ ಮಾನಸಿಕ ಅಸ್ವಸ್ಥಳಂತೆ, ಸಮಾಜದಿಂದ ಹೊರಗಿರುವಂತೆ ಕಂಡರೂ ತನ್ನ ವಿಶೇಷ ಗುಣದಿಂದಾಗಿ ದೇವಾಲಯವನ್ನೇ ಕಟ್ಟಿಸಿಕೊಳ್ಳುತ್ತಾಳೆ.

ಸತ್ಯವತಿ ಸರಿರಾತ್ರಿ ಹೊತ್ತಿನಲ್ಲಿ ದೆವ್ವದಂತೆ ಕಾಣುತ್ತಾ ಕಂಡಕಂಡವರ ಮನೆ ಬಾಗಿಲನ್ನು ಬಡಿಯುತ್ತಾ "ತಿನ್ನಾಕೆ ಏನಾದ್ರೂ ಕೊಡ್ರೋ" ಎಂದು ಕೇಳುತ್ತಾ ಹಸಿವನ್ನು ಹಿಂಗಿಸಿಕೊಳ್ಳಲು ಬೇಡುತ್ತಾ ಹೋಗುವ ಚಿತ್ರಣ ಮೇಲ್ನೋಟಕ್ಕೆ ಸಿಟ್ಟು ಬರಿಸುತ್ತಾ ಊರಿಗೇ ಒಂದು ರೀತಿಯ ಉಪದ್ರವದಂತೆ ಕಾಣುತ್ತಾಳೆ. ಆದರೆ ಅವರ ಪ್ರತಿ ಮಾತು ಸಹ ಸಮಾಜವನ್ನು ಬೇರೊಂದು ದೃಷ್ಟಿಕೋನದಿಂದ ನೋಡಿ ಗ್ರಹಿಸುವಂತಹ ಮಾತುಗಳು. ಸಮಾಜವನ್ನು ಅಭಿವೃದ್ಧಿಯ ಹಿನ್ನೆಲೆಯಲ್ಲಿ ಪ್ರೇರೇಪಿಸುವ ಮಾತುಗಳನ್ನು ಜೋರು ಜೂರತ್ತಿನಲ್ಲೇ ಹೇಳುವಂತಹವಳು. "ಹೆಂಡ್ತಿ ಕಾವೊಳ್ಗೆ ಅದೇನು ಕೊಸರಾಡಿ, ಏಳೋ, ತಿನ್ನಾಕೆ ಏನಾದ್ರೂ ಕೊಡ್ರೋ ಮಾರಾಯ".[೨] ಇವಳ

ಮಾತನ್ನು ಕೇಳಿ ಇರುಸು ಮುರುಸುಗೊಂಡು ಬಾಯಿಗೆ ಬಂದ ಹಾಗೆ ಸವತಿ ಹಲ್ಕಟ್‌ಮುಂಡೆ, ಎಂದು ಬೈದಾಗಲೂ ಕೋಪಮಾಡಿಕೊಳ್ಳದೆ,

> "ಯಾಕೆ ಅನ್ಯಾಯದ ಮಾತಾಡೀಯೆ ಗರತಿ? ಸವತಿ ಮಾಡ್ಕೊಂಡು ನನಗೆ ಪಾಪ ಹಂಚ್ಕೊಡೋಕ್ಕಾದೀತೇನೆ ಮಗಳೇ! ಅದುನ್ನ ಗಂಡ ಹೆಂಡ್ತಿಯೇ ಹಂಚ್ಕೊಬೇಕು, ಹಂಚ್ಕೊಂಡು ಉಣ್ಣಿ!"[೩]

ಎಂದು ಹೇಳುತ್ತಾ ಪಾಪದ ಫಲವನ್ನು ಗಂಡ ಹೆಂಡತಿಯರಿಬ್ಬರೂ ಅನುಭವಿಸಬೇಕೆಂಬ ತಾತ್ವಿಕ ವಿಚಾರವನ್ನು ಹೇಳುತ್ತಾಳೆ. ಸವತಿ ಎಂದವಳಿಗೆ ಗರತಿ ಎನ್ನುತ್ತಾ ತನ್ನ ವಿಶೇಷತೆಯನ್ನು ಮೆರೆಯುತ್ತಾಳೆ.

ಆಲಸ್ಯರನ್ನು, ಮೈಗಳ್ಳರನ್ನು, ಸೂರ್ಯ ಹುಟ್ಟಿದ ಮೇಲೆ ಏಳುವವರನ್ನು ಕಂಡರೆ ಸತ್ಯವತಿಗೆ ಆಗದು. ಹೆಂಗಸು ಬಹುಬೇಗ ಎದ್ದು ಕೆಲಸ ಕಾರ್ಯಗಳಲ್ಲಿ ತೊಡಗಿಕೊಳ್ಳಬೇಕೆಂದು ಬಲು ನಾಜೂಕಾಗಿ ಹೇಳುತ್ತಾಳೆ.

> "ಏಳಮ್ಮ ಎದ್ದು ಬಾಗ್ಲು ತೆಗಿ, ಕೂಗೋ ಕೋಳಿಯಾಗಿ, ಹಾಡೋ ಹಕ್ಕಿಯಾಗಿ ಇರಬೇಕಾದ ಹೆಂಗ್ಸು ಹಿಂಗೆ ಮಲಿಕೊಂಡ್ರೆ ಹೆಂಗೆ?"[೪]

ಎಂದೂ "ನಿನ್ನ ಗಂಡ್ನಾ ಇವುನು? ಹೊತ್ತು ಹುಟ್ಟಿ ಮಾರುದ್ದ ಬಂದಿದ್ರು ಬಿದ್ದವನಲ್ಲ ಏನು ಕೈಕಾಲು ಸೇದ್ಕೊಂಡವಾ?"

ಎನ್ನುವುದು, "ಲೇ ಮಗಳೇ ಗಂಡನ ಬಾಳಾಟುಕ್ಕೆ ಹೆಣ್ಣೇ ಕೇಂದ್ರುವಂತೆ! ಮಲಗಿರೋ ಮೈಗಳ್ಳ ಗಂಡುಸ್ಗೆ ಏಟುದಿನ ಅಂತ ಏಳೇಳ್ಸಿ ಹಿಟ್ಹಾಕಿ? ಕೂತ್ಕೊಂಡು ಉಣ್ಣೋನಿಗೆ ಕುಪ್ಪರಿಕೆ ಹಣ್ವೂ ಸಾಲ್ದಂತೆ ಅಮ್ಮೀ"[೫] ಎಂದು ಗಂಡಸಿನ ಸೋಮಾರಿತನವನ್ನು ಹೋಗಲಾಡಿಸುವಿಕೆಯನ್ನು ಹೇಳುತ್ತಾಳೆ. ಪಡ್ಡೆ ಹುಡುಗರನ್ನು ಕುರಿತಂತೆ,

> "ಅಲಕನ್ರೋ ಗುಲಾಮ್ರು, ಶಾಲ್ಗೋಗಿ ನಾಕಕ್ಷರ ಏನಾರ ಕಲ್ತಿದ್ದೀರಾ? ಹೋಗ್ಲಿ ಗಾರೆ ಕೆಲ್ಸ ಬತ್ತದಾ? ಬಂಗ್ಲೆ ಕಾಯೋದು ಗೊತ್ತದಾ? ಬ್ಯಾಡ ಕಸ ಹೊಡೆಯೋದು ತಿಳ್ದಿದ್ದೀರಾ? ಅದು ಬ್ಯಾಡ ನಿಮ್ಮ ಮೂಗಿನ ಮುಸ್ರೆ ಕಿತ್ಕೊಳ್ಳೋದು ಗೊತ್ತಾ? ಆಂ ಹೇಳ್ರೋ ಏನ್ಕಲ್ತಿದ್ದೀರೀ? ಅಪ್ಪವ್ವ ತಂದು ಹಾಕಿದ್ದ

ತಿಂದ್ಕೊಂಡು ಗುಂಡ್ರು ಗೂಳಿಯಂಗೆ ಗುಟ್ರು ಹಾಕ್ತಿರೇನ್ರೋ? ನೀವಾಗೆ ಎದ್ದೋಯ್ತೀರೋ ಇಲ್ಲಾ ಏಳಿಸ್ಲೋ"[1]

ಎನ್ನುವಂತಹ ಮಾತುಗಳು ಗಂಡಾಗಲೀ, ಹೆಣ್ಣಾಗಲೀ, ಗಂಡನಾಗಲೀ, ಹೆಂಡತಿಯಾಗಲೀ, ಮಕ್ಕಳಾಗಲೀ ಹೇಗಿರಬೇಕು, ಹೇಗಿರಬಾರದು ಎಂಬ ತಿಳುವಳಿಕೆಯನ್ನು ನೀಡುತ್ತಾ ಜೀವನ ಸಾಗಿಸುತ್ತಿರುತ್ತಾಳೆ. ಲೋಕದ ಜನ ಪರಸ್ಪರ ಸಹಾಯ ಮಾಡಬೇಕು ಎನ್ನುವ ನಿಲುವನ್ನು ಹೊಂದಿದ್ದ ಸತ್ಯವತಿ ಕುಡುಕರಿಗೆ, ಗಂಡ–ಹೆಂಡಿರ ಜಗಳ ಕುರಿತಂತೆ, ಹಿರಿಯರನ್ನು ಹೇಗೆ ನೋಡಿಕೊಳ್ಳಬೇಕು. ಹೀಗೆ ಎಲ್ಲವನ್ನು ಕುರಿತು ಸಲಹೆ ಕೊಡುತ್ತಾಳೆ. "ಮನುಷರ‍್ರುಗೆ ಮನುಷ್ರು ಆಗ್‌ದೆ ಇರೋ ಹೊತ್ತಾ ಇದು? ಇದ್ರೆ ಕೊಡು ಇಲ್ಲದಿದ್ರೆ ಇಲ್ಲ ಅನ್ನು ಮಗಳೇ ಹೋಯ್ತೀನಿ ಮುಂದ್ಕೆ"[2] ಎಂಬ ಮಾತು ಮನುಷ್ಯ ಮನುಷ್ಯರು ಎಂಥಾ ಸಮಯದಲ್ಲೇ ಆಗಲೀ ಸಹಾಯಕ್ಕೆ ಮುಂದಾಗಬೇಕೆನ್ನುವ ಸಾಮಾಜಿಕ ಮೌಲ್ಯವನ್ನು ಎತ್ತಿ ಹಿಡಿಯುವಂತದ್ದು. ಇಂತಹ ಸತ್ಯವತಿ ಹೆಣ್ಣು ಕುಲದ ಒತ್ತಾಸೆಯ ಮೂರ್ತಿಯಂಗಿದ್ದಳು.

ಸತ್ಯವತಿ ತನ್ನ ಬಜಾರಿ ಭಾಷೆಯಲ್ಲಿಯೇ ಬೈಯುತ್ತ ಪರಂಪರಾಗತವಾಗಿ ಬಂದ ಚೈತನ್ಯಶೀಲ ಬದುಕನ್ನು ನೋಡುವ ಕ್ರಮ, ಯಾವುದೇ ವ್ಯಕ್ತಿಗೆ ಬಡತನವಾಗಲೀ ದಾರಿದ್ರ್ಯವಾಗಲೀ ಬಂದಿದ್ದರೆ ಅದು ಅವನೊಳಗಿನ ಆಲಸ್ಯದಿಂದ ಎಂದು ಛೇಡಿಸುತ್ತಾಳೆ. ಹೀಗೆ ಹುಚ್ಚಿಯೊಬ್ಬಳು ಪ್ರಕೃತಿಯ ಪ್ರತೀಕವಾಗಿ ಊರನ್ನು ಪೊರೆಯುತ್ತಾ, ಸಂಸ್ಕೃತಿಯೆಂದರೆ ಹೇಗಿರಬೇಕೆಂದು ತಿಳಿಹೇಳುವ ಮೂಲಕ ಸಮಾಜದ ವೈರುದ್ಯಗಳನ್ನು, ಶೋಷಕ–ಶೋಷಿತ, ಹಳ್ಳಿ–ಪಟ್ಟಣ, ಬಡವ–ಶ್ರೀಮಂತ ಎಂಬ ತರತಮವಾದ ಸಮಾಜದ ವಿಸ್ತೃತ ನೆಲೆಗಳನ್ನು ಶೋಧಿಸುವುದನ್ನು ಕಾಣಬಹುದು.

ಮಾನವತೆಯೇ ವ್ಯಕ್ತಿಗಳ ಅಳತೆಗೋಲಾಗಿರಬೇಕು ಎನ್ನುವುದನ್ನು ಧ್ವನಿಸುವ ಪಾತ್ರ 'ಸತ್ಯವತಿ'. ಸತ್ಯವತಿ ಓದು ಬರಹ ಕಲಿತವಳಲ್ಲ, ಆದರೂ ತನಗೆ ತಿಳಿದಿದ್ದನ್ನು ಹೇಳುತ್ತಿದ್ದಳು. ಅವಳ ಆ ಮಾತುಗಳು ವೈಚಾರಿಕತೆಯಿಂದ ಕೂಡಿದೆ. ಸತ್ಯವತಿಯ ಹುಟ್ಟಿನಲ್ಲೇ ಒಂದು ಸಂಕೀರ್ಣತೆಯಿದೆ. ಆಕೆ ತನ್ನ ಸುತ್ತಲೂ ಎದುರಿಸುವ ಪ್ರತಿಯೊಂದು ಸನ್ನಿವೇಶವೂ ಒಂದಲ್ಲ ಒಂದು ತೆರನಾದ ಬಲೆಯಾಗುತ್ತದೆ. ಈ ಕಥೆಯೊಳಗೆ ಸತ್ಯವತಿಯದು ಇಡೀ ಕೇರಿಯ ಸಾಕ್ಷಿಪ್ರಜ್ಞೆಯಾಗಿ ಕಾಣುವ, ಸಮಾಜದ ಮೇಲೆ ಪರಿಣಾಮ ಬೀರುವ ವ್ಯಕ್ತಿತ್ವ, ಇದು ಹೆಣ್ಣಿನ ಇರುವಿಕೆಯನ್ನು ಭಿನ್ನವಾಗಿ ಕಲ್ಪಿಸಿದ ಪಾತ್ರ.

'ಜಪದಕಟ್ಟೆ'ಯ ರುಕ್ಮಿಣಿಯು ಪ್ರಕೃತಿ ಸಂಸ್ಕೃತಿಗಳ ಪ್ರತಿಮೆ. ಕಾರಣ ಶಂಕರಯ್ಯ ಉತ್ತಮ ಕುಲದಲ್ಲಿ ಹುಟ್ಟಿದವನಾಗಿದ್ದರೂ ತನ್ನ ಹದಿಹರೆಯದ ಚಾಳಿಗಳಿಂದ ತನ್ನ ಪಾತಿವ್ರತ್ಯವನ್ನು ಹಾಳುಮಾಡಿಕೊಂಡಿದ್ದನು. ಅಂತಹ ಅವನ ಕಾಮದಾಹಕ್ಕೆ ಒಬ್ಬ ಹೆಣ್ಣು ಮಗಳೂ ಬಲಿಯಾಗಿದ್ದಳು. ಇದರಿಂದ ಹೆದರಿ ಹುಚ್ಚು ಹಿಡಿದವನಂತೆ ಊರು ಕೇರಿ, ಪೇಟೆ-ಪಟ್ಟಣ, ಹೆಣ್ಣು-ಹೆಂಡ ಅಂತೆಲ್ಲಾ ಮುವ್ವತ್ತು ವರ್ಷ ಅಲೆದು ಮತ್ತೆ ಊರಿಗೆ ಮರಳಿದಾಗ ಅವನ ಮಲತಾಯಿಯ ಮಕ್ಕಳು ಆತನನ್ನು ಸ್ವೀಕರಿಸುವುದಿಲ್ಲ; ಮನೆಗೆ ಸೇರಿಸುವುದಿಲ್ಲ. ಇಂತಹ ಅಸಹಾಯಕ ಸ್ಥಿತಿಯಲ್ಲಿ ಕೈಹಿಡಿದವಳು ರುಕ್ಮಿಣಿ. ರುಕ್ಮಿಣಿ ಜಾತಿಯಲ್ಲಿ ಕ್ರಿಶ್ಚಿಯನ್. ಶಂಕರಯ್ಯನಿಗಿಂತ ಕೆಳವರ್ಗದವಳು ಆದರೂ ಆಕೆ ವಯಸ್ಸಿನಲ್ಲಿ ಅತ್ಯಂತ ಹಿರಿಯನೂ, ಚರಿತ್ರೆಹೀನನೂ ಆಗಿದ್ದ ಶಂಕರಯ್ಯನನ್ನು ಮೆಚ್ಚಿ ಮದುವೆಯಾಗಿದ್ದಳು. ಶಂಕರಯ್ಯನ ಸಿಟ್ಟು ಸಿಡುಕು, ಬೇಸರ, ಬೇಗುದಿ, ಒಂಟಿತನ, ಅಲೆದಾಟ, ಕಾಮದಾಹ ಎಲ್ಲವನ್ನೂ ಹೋಗಲಾಡಿಸಿ ಅವ್ವಳಾಗಿ, ಹೆಂಡತಿಯಾಗಿ, ಪ್ರೇಯಸಿಯಾಗಿ ಮಗಳಾಗಿಯೂ ಸೇವೆ ಮಾಡಿ ಪ್ರೀತಿ ಗೌರವ ತೋರಿಸಿ ಅವನನ್ನು ಒಬ್ಬ ಮನುಷ್ಯನನ್ನಾಗಿ ಮಾಡಿದ್ದಳು. ಶಂಕರಯ್ಯನನ್ನು ಮೆಚ್ಚಿ ಬಂದಾಗ ಇಡೀ ಊರೇ ಅವಳಿಗೆ ಬಹಿಷ್ಕಾರ ಹಾಕಿದ್ದರೂ ಹತಾಶಳಾಗದೆ ಸುಖಮಯವಾಗಿ ಜೀವನ ಸಾಗಿಸುತ್ತಿದ್ದಳು. ಪ್ರಕೃತಿಯಂತೆ ತಾಳ್ಮೆ ಉಳಿಸಿಕೊಂಡು ಗಟ್ಟಿ ಸಂಸ್ಕೃತಿಯನ್ನು ಕಟ್ಟಿದ್ದಳು.

ಹಾಗೆಯೇ ಕರಗವ್ವ ಸಹ ಗಟ್ಟಿತನದಿಂದ ತುಂಬಿದ ಪಾತ್ರ. ಮದುವೆಯಾದ ಗಂಡನನ್ನು ಬಿಟ್ಟು ಒಬ್ಬ ನಾಟಕದ ಮೇಷ್ಟ್ರ ಜೊತೆ ಓಡಿ ಬಂದು, ಅವನೂ ಬಿಟ್ಟು ಹೋದಾಗ ಹತಾಶಳಾಗದೆ, ಮಕ್ಕಳಿಲ್ಲದಿದ್ದರೂ ಸಹ ಊರಿನ, ಮಕ್ಕಳನ್ನೇ ತನ್ನ ಮಕ್ಕಳೆಂದು ತಿಳಿದು ಹಿತ-ಮಿತವಾಗಿ ಜೀವನ ಸಾಗಿಸುತ್ತಿದ್ದ ಕರಗವ್ವ ಹೆಣ್ಣಿನ ಇರುವಿಕೆಯನ್ನು ಶಕ್ತವಾಗಿಸುವ ಪಾತ್ರ. ತನ್ನ ಒಂಟಿ ಬದುಕಿನಲ್ಲೂ ಜೀವನೋತ್ಸಾಹವನ್ನು ತೋರುತ್ತಾ ತನ್ನ ಸುತ್ತಲಿನವರಿಗೂ ಪ್ರೀತಿ-ವಿನಯವನ್ನು ಹಂಚುತ್ತಾ ಇದ್ದ ಕರಗವ್ವ ಎಲ್ಲರ ಮೆಚ್ಚುಗೆಗೆ ಪಾತ್ರಳಾಗುತ್ತಾಳೆ.

> "ನಂಜಿ ಒಳಗಿನಿಂದ ಬಂದ ಬಿಕ್ಕಳಿಕೆಯನ್ನು ತಡೆದು ಸೆರಗನ್ನು ಬಾಯಿಗೆ ತುರುಕಿಕೊಂಡಳು. ಇಷ್ಟು ಕಾಲ ಕೋತಿಯಾಗಿ ಕಾಡಿದ ಈ ಕರಗವ್ವ ಇವತ್ತು ಏನಾಗಿ ಕಂಡುಬಿಟ್ಟಳು! ಮಗನೇ ಇದಕ್ಕೆ ಕಾರಣನಾದನಲ್ಲ..... ನಂಜಿ ಕರಗವ್ವ ರೀತಿ ನೀತಿ ಕಂಡು ಕರಗತೊಡಗಿದಳು. ಆಗ ಇವಳು ಇನ್ನೊಬ್ಬನ ಜೊತೆ ಓಡಿ ಬಂದೋಳು ಅಂತ ರವೋಟಾದ್ರು ಕರುಣೆ, ಆದರ ಇತ್ತ ನನ್ನಲ್ಲಿ? ಅವನು-ಇವಳು ಅದೆಂಗ್ ಬೆಣ್ಣೆಯಂಗಿದ್ದರು? ದಿಟವಾಗಿ ಅದನ್ನು ಕಂಡರೆ ತನಗೇ

ಸೈಸೋದಿಕ್ಕೆ ಆಗುತ್ತಿರಲಿಲ್ಲ. ನಂಜಿ ಇದೀಗ ಕರಗವ್ವನ ಕೈಹಿಡಿದು ಹೆಣ್ಣಿನ ಮನ್ಸ ಹೆಣ್ಣೇ ಅರಿಯಕ್ಕಾಗ್ಲಿವ್ಲಲ್ಲ ನನ್‌ತಾಯಿ. ನೀನ್ ಜಾರಿದೋಳು, ಪೋಲಿ ಪಟಾಲಂಗೊಳ ಗುಂಪಿನೋಳು, ಇಂಥೋಳಿಗೆ ಸರ್ಕಾರದ ಪಿಂಚಣಿಗೆ ಬ್ಯಾರೆ ಕೊಡುಸ್ತರಲ್ಲ ಆ ಸೆಕೆಟ್ರಿ, ಕೆಂಚಪ್ಪ ಅಂತ ಹೇಸ್ಗೆ ಪಟ್ಕೊಂಡಿದ್ದೆ."[೮]

ಎಂದು ಹೇಳುವಲ್ಲಿ ಕರಗವ್ವನ ತಾಯಿ ಮಮತೆ, ತಾಳ್ಮೆ, ವಿನಯ ಎಲ್ಲವೂ ಮಾದರಿ ಸ್ತ್ರೀಯಂತೆ ಕಾಣಿಸುತ್ತದೆ.

ಇನ್ನು 'ದೊರೆ' ಕಥೆಯನ್ನು ಗಮನಿಸುವುದಾದರೆ ಹಳ್ಳಿಯ ಹೆಣ್ಣು ಮಗಳಾದರೂ ವಿವೇಕಿಯಾದವಳು ಗೌರಿ. ದೊರೆ ಮತ್ತು ಗೌರಿ ಬಾಲ್ಯದ ಗೆಳೆಯ ಗೆಳತಿಯರು. ಗೌರಿ ಎಂದರೆ ದೊರೆಗೆ ಅತಿಯಾದ ನಂಬಿಕೆ ಮತ್ತು ಗೌರವ. ಅವಳ ಮಾತೇ ಅವನಿಗೆ ವೇದವಾಕ್ಯ. ದೊರೆಯ ಹೆಸರಿನಲ್ಲಿ ಸೆಕ್ರೆಟರಿ, ಅಯ್ಯನೋರು ಮತ್ತು ಪಂಚಾಯ್ತಿ ಪೀವನ್ ನರಸಪ್ಪ ಈ ಮೂವರೂ ಸೇರಿ ಸರ್ಕಾರದವರು ದೊರೆಗೆ ನೀಡಿದ ಜೀತಪರಿಹಾರದ ದುಡ್ಡನ್ನು ಲಪಟಾಯಿಸುವ ಹುನ್ನಾರ ಮಾಡಿದ್ದನ್ನು, ದೊರೆಗಿಂತ ವಯಸ್ಸಿನಲ್ಲಿ ಚಿಕ್ಕವಳಾಗಿದ್ದರೂ ಸಹ ಬುದ್ಧಿವಂತೆಯಾದ ಗೌರಿ ದೊರೆಗೆ ತಿಳಿಸಿ ಹೇಳುವುದು, ಅವನಿಗೆ ಮನವರಿಕೆ ಮಾಡಿಕೊಡುವುದು ಸ್ತ್ರೀಯೊಬ್ಬಳು ಪುರುಷನ ಮೇಲೆ ನಡೆಯುವ ಶೋಷಣೆಯನ್ನು ತಪ್ಪಿಸುವ ಪಾತ್ರವಾಗಿ ಕಾಣಿಸುತ್ತಾಳೆ. ದೊರೆ ತನ್ನ ಒಡೆಯನ ಭಯಕ್ಕೆ ಹೆದರಿ ಬಚ್ಚಿಟ್ಟುಕೊಂಡಿದ್ದನು. ಇದನ್ನು ಗೌರಿ ಸಹಿಸಲಾರದೆ ಅವನ ಬಳಿ ಹೋಗಿ,

"ಸರ್‌ಕಾರ್‌ದೋರು ಕೊಡೋ ಜೀತ ಪರಿಹಾರದ ದುಡ್ಡಂತೆ ಅದು. ಅದು ನಿಂಗೇ ಸೇರಬೇಕಾದ್ದಂತೆ, ಹಂಗಿದ್ದ ಮ್ಯಾಕೆ ನೀನ್ಯಾಕೆ ಹಿಂಗೆ ಬಂದು ಅವುತ್‌ಕೋಬೇಕು"[೯]

ಎಂದು ಹೇಳಿ ಕಂಗಾಲಾದ ದೊರೆಯನ್ನು ಹುರಿದುಂಬಿಸಿ ಎಚ್ಚರಿಸುವ ಕೆಲಸ ಮಾಡುತ್ತಾಳೆ. ದೊರೆಗಿಂತ ಚಿಕ್ಕವಳಾದರೂ ಮಾನವೀಯತೆಯಲ್ಲಿ ಸ್ನೇಹಮಯಿಯಾಗಿ ಮೆರೆಯುವುದನ್ನು ಕಾಣಬಹುದು.

ಮತ್ತೊಂದು ಪ್ರಮುಖ ಕಥೆ 'ಕವಳ' ಚಿಕ್ಕಣ್ಣನವರ ಸಾಹಿತ್ಯ ಸೃಷ್ಟಿಯ ಕಾಲ ಒಂದು ರೀತಿಯ ಸಂಕ್ರಮಣದ ಕಾಲ. ನವ್ಯದ ಬಿಗಿ ಬಂದಗಳನ್ನು ಬಿಡಿಸಿಕೊಂಡು ಹೊಸದೊಂದು ಸಂವೇದನೆಗೆ ತುಡಿಯುತ್ತಿದ್ದ ಕಾಲ. ಶಿಕ್ಷಣದ ಮಹತ್ವವನ್ನು ಅರಿಯುವ ಕಾಲ. ದಲಿತರು,

ಅತ್ಯಂತ ಹಿಂದುಳಿದವರು ಹೀಗೆ ಅನೇಕರು ಶಿಕ್ಷಣಕ್ಕೆ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಿದ್ದ ಕಾಲ. ಅಂತಹ ಶಿಕ್ಷಣವನ್ನು ಪಡೆಯುವ ಕೆಳವರ್ಗವು ಎದುರಿಸುವ ಬವಣೆಯನ್ನು ಮುಖ್ಯ ವಸ್ತುವನ್ನಾಗುಳ್ಳ ಕಥೆ 'ಕವಳ'.

ಶೀರ್ಷಿಕೆಯೇ ಬಹಳ ಅರ್ಥಗರ್ಭಿತವಾಗಿರುವುದನ್ನು ಇಲ್ಲಿ ಗಮನಿಸಬಹುದು. ಕವಳ ಎಂದರೆ ಮಂಜು ಎಂದರ್ಥ. ಶತಶತಮಾನಗಳಿಂದ ಕವಿದಿರುವ ಅಜ್ಞಾನವನ್ನು, ಜಾತಿ ಎಂಬ ಮುಸುಕನ್ನು, ವರ್ಗ ತಾರತಮ್ಯವನ್ನು ಹೋಗಲಾಡಿಸುವ ಆಯುಧ 'ಶಿಕ್ಷಣ' ಎಂಬ ನಿಟ್ಟಿನಲ್ಲಿ ಈ ಕಥೆ ನಿರೂಪಿತವಾಗಿದೆ. ಅಂತಹ ಶಿಕ್ಷಣವನ್ನು ಪಡೆಯುವುದು ಅಷ್ಟು ಸುಲಭದ ಮಾತಲ್ಲ. ಉದ್ದೇಶಪೂರ್ವಕವಾಗಿ ಬಹಳ ಹಿಂದಿನಿಂದಲೂ ಕೆಳವರ್ಗವನ್ನು ಅದರಲ್ಲಿಯೂ ದಲಿತರನ್ನು ವ್ಯವಸ್ಥಿತವಾಗಿ ಹತೋಟಿಯಲ್ಲಿಟ್ಟುಕೊಳ್ಳುವ ತಂತ್ರಗಾರಿಕೆ ಗಮನಿಸಿದರೆ ಅದೊಂದು ಪೂರ್ವನಿಯೋಜಿತ ಚಿಂತನೆ ಎನ್ನಬಹುದು. ಕೆಳಜಾತಿಯವನೊಬ್ಬ ಓದು ಬರಹ ಕಲಿಯುತ್ತಾನೆಂದಾಗಲೀ, ಕಲಿಸುತ್ತಾನೆಂದಾಗಲೀ ಗೊತ್ತಾದರೆ ಈ ವ್ಯವಸ್ಥೆ ಬಹಿರಂಗವಾಗಿ ಪ್ರತಿಭಟಿಸದಿದ್ದರೂ ಗುಪ್ತವಾಗಿ, ಕುತಂತ್ರದಿಂದ ಅದನ್ನು ಹತ್ತಿಕ್ಕಲು ಬಳಸುವ ಮಾರ್ಗ ಅನೇಕವು. ಅಂತಹ ಮಾರ್ಗದ ಒಳಹನ್ನು ಅನಾವರಣಗೊಳಿಸುವುದು 'ಕವಳ' ಕಥೆ.

ಈ ಕಥೆಯಲ್ಲಿ ಬರುವ ಪ್ರಮುಖ ಪಾತ್ರಧಾರಿ ನರಸಪ್ಪ. ಈತ ಕೆಳವರ್ಗದವನು. ಈತನ ಹೆಂಡತಿ ತನ್ನ ಮಗನಿಗೆ ಓದು ಬರಹ ಕಲಿಸುವ ಸಲುವಾಗಿ ಶಾಲೆಗೆ ಕಳುಹಿಸಲು ಮುಂದಾಗುತ್ತಾಳೆ. ಜೀತ ಮತ್ತು ಕೂಲಿಯೇ ತಮ್ಮ ಜಾತಿಯ ಕೆಲಸವೆಂದು ಅರಿತ ನರಸಪ್ಪ ಇದಕ್ಕೆ ಒಪ್ಪುವುದಿಲ್ಲ. ಆಗಿದ್ದಾಗಲೂ ಅವನೊಡನೆ ಜಗಳವಾಡಿ ಮಗನನ್ನು ಶಾಲೆಗೆ ಕಳುಹಿಸುತ್ತಾಳೆ ನರಸಪ್ಪನ ಹೆಂಡತಿ. ಇಂತಹ ಕಾರ್ಯಕ್ಕೆ ಮೇಲ್ವರ್ಗದವರು ವಿರೋಧಿಸುವುದು ಸಹಜವೆಂದಾದರೂ ಅದೇ ಜನಾಂಗದವರು ಅದನ್ನು ಸಹಿಸದೆ ಹೇಗೆ ಸ್ವಾರ್ಥಿಗಳಾಗುತ್ತಾರೆ ಎಂಬುದನ್ನು ಈ ಕಥೆಯಲ್ಲಿ ಕಾಣಬಹುದು.

ಕುಂಬಳೇಗೌಡ್ರು ಮನೆ ಅಳಿಯ ಚೆಲುವಪ್ಪ, ಅವನ ದಾಯಾದಿ ಸಣ್ಣ, ಮನೆಯಾಳು ನಿಂಗ, ರಾಚ, ಸುಬ್ಬಪ್ಪ ಎಲ್ಲರೂ ಸೇರಿ ನರಸಪ್ಪನ ಹೆಂಡತಿಯ ಬಗ್ಗೆ ಅಪಪ್ರಚಾರ ಹಬ್ಬಿಸುತ್ತಾರೆ. ಜೀತ ಮಾಡುತ್ತಿದ್ದ ನರಸಪ್ಪ ತನ್ನ ಮಗನನ್ನು ಜೀತಕ್ಕೆ ಹಾಕಿದ್ದನು.

ತನ್ನ ಹೆಂಡತಿ ಬೋರಿಯ ರಂಪಾಟದಿಂದ ಜೀತವನ್ನು ಬಿಡಿಸಿ ಶಾಲೆಗೆ ಕಳುಹಿಸಿದ್ದನು ಅದನ್ನು ಸಹಿಸದ ಚೆಲುವಪ್ಪ, ಸಣ್ಣ, ನಿಂಗ, ರಾಚ, ಸುಬ್ಬಪ್ಪ ಎಲ್ಲರೂ ನರಸಪ್ಪನ ಹೆಂಡತಿಯ

ನಡವಳಿಕೆಯ ಬಗ್ಗೆಯೇ ಅಪಪ್ರಚಾರ ಹಬ್ಬಿಸುವ ಹುನ್ನಾರ ಮಾಡಿದರು. ಹಾಗೇ ನರಸಪ್ಪನ ತಲೆಯನ್ನೂ ಕೆಡಿಸಿದರು. ಶಾಲೆಯ ಮೇಷ್ಟ್ರಿಗೂ ನರಸಪ್ಪನ ಹೆಂಡತಿಗೂ ಅನೈತಿಕ ಸಂಬಂಧವಿದೆ ಎಂದೂ ಅದಕ್ಕೆ ಸಮಂಜಸವಾದ ಕಾರಣವನ್ನೂ ಕೊಟ್ಟರು.

> "ಆರೇಳು ವರ್ಷದ ಹಿಂದೆ ಈ ಉರ್ಗೆ ಮೇಟ್ರಾಗಿ ಬಂದಿದ್ದೋರು ಯಾರು? ಚಂದ್ರಸ್ವಾಮಿ ಅಲ್ವಾ! ಅವನು ಯಾವೂರೋನು? ನರಸಪ್ಪನ ಹೆಂಡ್ತಿ ಊರ್ನೋನಲ್ವಾ? ಅವನೇ ಈ ಊರ್ನ ಇಸ್ಕೂಲ್ಗೆ ಮೇಟ್ರಾಗಿ ಬಂದ್ನಾ, ಇವಳು ಇದೇ ಊರ್ಗೆ ಸೊಸೆಯಾಗಿ ಬಂದಳಾ! ಇದೋಗ್ಲಿ, ಅವರೂರ್ನಲ್ಲೂ ಸೈತ ಈ ಮೇಟ್ರ ಹೊಲಮನೆ ಕೆಲ್ಸಕ್ಕೆ ಅಂತ ಅವುಳು ಹೋಗ್ತಾ ಬತ್ತಾ ಇದ್ಲಾ. ಇನ್ನೇನಪ್ಪ ಬೇಕು ನಿಮ್ಗೆ, ಇದಕ್ಕಿಂತ ಸಾಕ್ಸಿ".[೧೦]

ಹೀಗೆ ಬೋರಿಯ ಮೇಲೆ ಇಲ್ಲ ಸಲ್ಲದ ಆರೋಪ ಹೊರಿಸಿ ನರಸಪ್ಪನ ತಲೆ ಕೆಡಿಸಿದರೂ ಇದಾವುದಕ್ಕೂ ಅಂಜದೆ ಬೋರಿ ತನ್ನ ಮಗನ ಆಸಕ್ತಿಗೆ ನೀರೆರೆದು ಶಾಲೆಗೆ ಕಳುಹಿಸಿದಳು. ಇವಳು ಹಠ ಮಾಡಿದ್ದಕ್ಕೆ 'ಬಾಯಿ ಮುಂದು ಮಾಡೋ ಹೆಣ್ಣು; ಊರು ಮುಂದಿನ ಹೊಲ ಎರಡೂ ಹಾಳೆ' ಎಂಬಂತೆ ತಿಳಿದು ಮಗನನ್ನು ಎಳೆದು ತರಲು ಶಾಲೆಗೇ ಹೋದ ನರಸಪ್ಪನಿಗೆ ಆಶ್ಚರ್ಯದಿಂದ ದಿಗ್ಭ್ರಮೆಗೊಂಡ. ಓದು-ಬರಹ ಕಲಿಯುವುದು ನಮ್ಮಂಥವರಿಗಲ್ಲ, ಅಂಥ ಹುಚ್ಚು ಸುಮ್ಮಸುಮ್ಮನೇ ಬರುವುದಿಲ್ಲ ಅಂಥವರ ರಕ್ತದ ಗುಣ ಇದ್ದಾಗ ಮಾತ್ರ ಆ ಬುದ್ಧಿ ಬರುವುದು ಎಂಬೆಲ್ಲಾ ಮಾತಿನ ಮರ್ಮ ಅರಿವಾಯಿತು. ಮಗನನ್ನು ಹಿಡಿದು ಒಡೆದು ಎಳೆದಾಡುವ ಸಂದರ್ಭದಲ್ಲಿ ಸುತ್ತ ನೆರೆದ ಮಕ್ಕಳನ್ನು ನೋಡುತ್ತಾನೆ. ಅಲ್ಲಿ ನಿಂಗನ ಮಗ, ಸುಬ್ಬಪ್ಪನ ಮಗಳು, ರಾಚನ ಮಗ, ಸಣ್ಣನ ಮಗ-ಆ ಘನಂದಾರಿ ಜನರ ಎಲ್ಲ ಮಕ್ಕಳೂ ಶಾಲೆಗೆ ಬಂದಿದ್ದಾರೆ. ರೋಷ, ನಿರಾಶೆ, ಸಂಕಟ, ಅವಮಾನ, ಅಸಹಾಯಕತೆ, ತಳಮಳಗಳಿಂದ ನಲುಗಿಹೋಗಿದ್ದ ನರಸಪ್ಪ ಜ್ಞಾನೋದಯವಾದಂತೆ ತನ್ನ ತಪ್ಪಿನ ಅರಿವಾಗಿ "ನೀನು ಬರ್ಕೋ ಮಗಾ" ಎಂದು ಹೇಳಿ ಮಗನ ತಲೆನೀವಿ ಕಳುಹಿಸಿದ. ಇಡೀ ವ್ಯವಸ್ಥೆಯ ವಿರುದ್ಧವೇ ನಿಂತು ಬೋರಿ ತನ್ನ ಮಗನನ್ನು ಶಾಲೆಗೆ ಕಳುಹಿಸಿದ್ದು, ಹಾಗಾಗಿ ಅತ್ಯಂತ ವಿಶೇಷ ರೀತಿಯಲ್ಲಿ ಈಕೆಯನ್ನು ಹೆಸರಿಸಬಹುದು.

ಆದರೆ 'ದಾವರ' ಕಥೆಯ ಜವ್ರನ ತಾಯಿ ಬೋರಿಯಂತೆ ತಾನು ಅಂದುಕೊಂಡದ್ದನ್ನು ಸಾಧಿಸಲಾಗಲೇ ಇಲ್ಲ. ಜವ್ರನ ತಾಯಿ ಬಡವಿಯಾದರೂ ಗುಣವಂತೆ, ಶೀಲವಂತೆ, ಸ್ವಾಭಿಮಾನಿ ಜೊತೆಗೆ ಬಡತನವಿದ್ದರೂ ಮರ್ಯಾದಸ್ಥೆ. ಇವಳ ಮಾತನ್ನು ಲೆಕ್ಕಿಸದೆ ಬುದ್ಧಿ ಬಲಿಯುವ

ಮೊದಲೇ ಇವಳ ಮಗನನ್ನು ಹುನುಮಂತಪ್ಪನ ಹಟ್ಟೀಲಿ ಜೀತಕ್ಕಿರಿಸಿದ್ದನು ಅವಳ ಗಂಡ. ಆ ಜವ್ರನಿಗೋ ಅಕ್ಷರಾಭ್ಯಾಸವೆಂದರೆ ಪ್ರಾಣ, ಪರಮಾನ್ನ. ಆದರೆ ಅವರ ಅಪ್ಪ ಮೈಮುರಿದು ದುಡಿಯದೆ ಸೋಂಬೇರಿಯಾದುದರಿಂದ ಮಗನನ್ನು ಶಾಲೆಗೆ ಕಳುಹಿಸದೆ ಜೀತಕ್ಕಿಟ್ಟಿರುತ್ತಾನೆ. ಜವ್ರನಿಗೋ ಅವನ ಓರಗೆಯ ಹುಡುಗರೆಲ್ಲ ಶಾಲೆಗೆ ಹೋಗುವುದನ್ನು, ಅಲ್ಲಿ ಅವರು ಬರೆದು ಹಾಡುವುದನ್ನು ಎಮ್ಮೆ, ದನ ಮೇಯಿಸುತ್ತಿದ್ದರೂ ಓಡಿ ಬಂದು ಶಾಲೆಯಲ್ಲಿ ಇಣಿಕಿ ನೋಡಿ ಆಸೆಯಾಗಿ ತರಗತಿಯ ಒಳಗೆ ಹೋಗಲು, ಕೆಲವು ಹುಡುಗರು ಇವನನ್ನು ಅವಮಾನಿಸಿ ಹೊರಗಟ್ಟುತ್ತಾರೆ. ಶಾಲೆಯ ಮೇಷ್ಟ್ರು ಇವನ ಆಸಕ್ತಿ ಕಂಡು ನಿಮ್ಮ ಅಪ್ಪ-ಅವ್ವನನ್ನು ಕರೆದುಕೊಂಡು ಬಾ ಶಾಲೆಗೆ ಸೇರಿಸ್ಕೋತೀವಿ ಎಂದು ಹೇಳುತ್ತಾರೆ.

ಜವ್ರ ಬಹಳ ಸಂತೋಷದಿಂದ ಮನೆಗೆ ಬಂದು ಅವ್ವ ಅಪ್ಪನ ಹತ್ತಿರ ಹೇಳುತ್ತಾನೆ. ಬಡತನದ ಬೇಗೆಯಲ್ಲಿ ಬೇಯುತ್ತಿದ್ದರೂ ಸಹ ಅವನ ತಾಯಿ ಮಗನ ಮಾತು ಕೇಳಿ ಪುಳಕಿತಳಾಗಿ ಆನಂದಗೊಂಡು ಶಾಲೆಗೆ ಕಳುಹಿಸುವಂತೆ ಗಂಡನನ್ನು ಒಪ್ಪಿಸಲು ಮುಂದಾಗುತ್ತಾಳೆ. ಆದರೆ ಆ ಕ್ಷಣದ ದುಡಿಮೆಯೇ ಮುಖ್ಯವೆಂದು ತಿಳಿದ ಅವಿವೇಕಿ ತಂದೆ ಅದಕ್ಕೆ ಒಪ್ಪದೆ ನಿರಾಕರಿಸುತ್ತಾನೆ. ಕವಳದ ನರುಸಪ್ಪ ಮೊದಮೊದಲು ವಿರೋಧಿಸಿದರೂ ತಿಳಿಹೇಳಿದ ಮೇಲೆ ಮಗನನ್ನು ಶಾಲೆಗೆ ಕಳುಹಿಸಲು ಒಪ್ಪುತ್ತಾನೆ. ಇದರಿಂದ ಮನನೊಂದು ಜವ್ರ ದುಃಖಿತನಾಗುತ್ತಾನೆ. ಓದುವ ಅತಿಯಾಸೆ ಅವನನ್ನು ಪುಸ್ತಕ ಮತ್ತು ಸ್ಲೇಟನ್ನು ಕದಿಯುವ ಹಾಗೆ ಮಾಡುತ್ತದೆ. ಜವ್ರನ ವಯಸ್ಸಿನವನೇ ಆದ ದೇವ್ರಾಜ ಮತ್ತು ಅವನ ಅಣ್ಣ ಸೋಮಪ್ಪ ಬಂದು ರಂಪ ಮಾಡಿ ಅದನ್ನು ಕಸಿದುಕೊಂಡು ಬಾಯಿಗೆ ಬಂದ ಹಾಗೆ ಬೈದು ಹೋಗುತ್ತಾರೆ. ಇದರಿಂದ ನೊಂದ ಜವ್ರ ಅವ್ವನನ್ನು ತಬ್ಬಿಕೊಂಡು ಅಳುತ್ತಾನೆ. ಮಗನಿಗೆ ಓದಲು ಸಾಧ್ಯವಾಗುತ್ತಿಲ್ಲವಲ್ಲ ಎಂದು ತಾಯಿಯೂ ರೋಧಿಸುತ್ತಾಳೆ.

'ಕವಳ' ಕಥೆಯಲ್ಲಿ ಮಗನನ್ನು ಶಾಲೆಗೆ ಸೇರಿಸಿದ ಮೇಲೆ ಅಸೂಯೆ ಪಡುವ ಸಮಾಜ 'ದಾವರ' ಕಥೆಯಲ್ಲಿ ಶಾಲೆಗೆ ಸೇರಿಸುವ ಮೊದಲೇ ದಲಿತ ವರ್ಗದವರನ್ನು ದಮನಿಸುವ ಕೆಲಸ ಮಾಡುತ್ತವೆ. ಒಟ್ಟಾರೆ 'ದಾವರ'ದ ತಾಯಿ ಅಸಹಾಯಕಳಾಗುತ್ತಾಳೆ. 'ಕವಳ'ದ ತಾಯಿ ಜಯ ಸಾಧಿಸುತ್ತಾಳೆ.

ಪ್ರಕೃತಿ, ಪರಿಸರ ಚಿಕ್ಕಣ್ಣನವರಿಗೆ ಕಥೆಬರೆಯಲು ಬಳಸುವ ಸಾಮಗ್ರಿಗಳಲ್ಲ. 'ತನ್ನಂತೆ ಪ್ರಕೃತಿ ಮತ್ತು ಪ್ರಕೃತಿಯಂತೆ ನಾನು' ಎಂಬ ಅವಿನಾಭಾವ ಸಂಬಂಧದಿಂದ ಕೂಡಿರುವಂಥದ್ದು. ಇನ್ನೂ ಮುಖ್ಯವಾದ ಸಂಗತಿ ಎಂದರೆ ಈ ಪ್ರಕೃತಿ ಮಾನವಾತೀತ ಒಂಟಿ ಧ್ವನಿ ಅಲ್ಲ. ಎಲ್ಲರ

ಜೀವನದಲ್ಲಿಯೂ ತನ್ನ ಕ್ರಿಯೆಗೂ ಮನುಷ್ಯನ ಕ್ರಿಯೆಗೂ ಅವಿನಾಭಾವ ಹೋಲಿಕೆಯಿರುವುದು ಸಹಜವಾಗಿಯೇ ಒಡಮೂಡಿದೆ. ಇಲ್ಲಿ ಪುನಸ್ಸೃಜಿಸುವ ಪ್ರಕೃತಿ ಜಡವಲ್ಲ, ದಾಖಲೆಯಲ್ಲ, ವರದಿಯಲ್ಲ, ವ್ಯಾಮೋಹ ಅಲ್ಲ; ಅದು ಚಲಿಸುವ ಜನವರ್ಗದೊಡನೆ ದುಡಿಯುತ್ತಿರುವ ಚೈತನ್ಯ.

ಚಿಕ್ಕಣ್ಣನವರ ಕಥೆಗಳಲ್ಲಿ ಗಮನಿಸುವ ಮತ್ತೊಂದು ಅಂಶವೆಂದರೆ ಸ್ತ್ರೀಪ್ರಜ್ಞೆಯು ಪ್ರಕೃತಿಯೊಂದಿಗೆ ಸಂಬಂಧ ಕಟ್ಟಿಕೊಂಡಿರುವುದು. ನದಿ, ಬೆಟ್ಟ, ಗುಡ್ಡ, ಮರ-ಗಿಡಗಳು, ನದಿ-ಗಾಳಿ, ಬೆಳಕು-ಮಂಜು, ಪ್ರಾಣಿ-ಪಕ್ಷಿಗಳು ಅವುಗಳ ಚಲನವಲನಗಳಿಗೂ, ಸ್ತ್ರೀ ಒಳಹೊರಗಣ ಚಲನವಲನಗಳಿಗೂ ಅವಿನಾಭಾವ ಸಂಬಂಧವಿರುವುದನ್ನೂ ಕಾಣಬಹುದು. 'ಜಪದಕಟ್ಟೆ'ಯ ಕಾವೇರಿ ನದಿಯ ವರ್ಣನೆಗೂ ರುಕ್ಮಿಣಿಗೂ, 'ಬೆವರಿನ ವಾಸನೆ'ಯ ಆಂಟಿಯ ಭಾವನೆಗಳಿಗೂ ಹೊರಗಿನ ಕೋಳಿಹುಂಜದ ಆಟವನ್ನೂ ವಿವರಿಸುವಲ್ಲಿ ಸ್ತ್ರೀಯ ಜೊತೆ ಜೊತೆಯಾಗಿಯೇ ಪ್ರಕೃತಿಯನ್ನು ಗುರ್ತಿಸಿರುವುದನ್ನು ಕಾಣಬಹುದು.

"ಕುಳಿರ್‌ಗಾಳಿಯು ಕಿರಣ-ಎಲೆಗಳ ನಡುವೆ ಆಟ ಆಡುತ್ತಿತ್ತು"
"ಹೊಳೆದಂಡೆಯ ಇಕ್ಕೆಲದ ಮರಗಳ ಸಂದಿಯಿಂದ ನೋಡಿದರೆ ಅಸೀಮ ಜಗತ್ತಿನ ತಳದಲ್ಲಿ ತಾನೊಂದು ಕಣ!"

"ಶಂಕರಯ್ಯನ ಮುಖದೊಳಗೆ, ನೀರೊಳಗೆ ಮೂಡೊ ಗುಳ್ಳೆಯಂಗೆ ನಗೆ ಮೂಡಿತು. ಶಾರದೆಗೂ ನಿನಿಗೂ ಎಷ್ಟೊಂದು ಅಂತರ"

"ಮೀನು ಆಳದ ನೀರಿನ ಗುಂಡಿಯಲ್ಲಿ ಆಡುತ್ತಿದ್ದೊ. ಅಡೊಗಡೆಯಿಂದ ಕಾವೇರಿಮಾತೆ ಅದೆಷ್ಟು ತಣ್ಣಗೆ ಸದ್ದಿಲ್ಲದೆ ಹರಿದುಹೋಗುತ್ತಿದ್ದಳು! ವರ್ಷದ ಎರಡು ಮಾಸದಲ್ಲಿ ಭೋರ್ಗರೆದು ಮತ್ತೆ ಮೂರು ತಿಂಗಳಲ್ಲಿ ತುಳುಕಾಡದೆ ಒಡಲು ತುಂಬಿಕೊಂಡು, ಉಳಿದೇಳು ಮಾಡ ಹಿಂಗೆ, ಕಡುಮೌನಿಯಾಗಿ, ಭೂಮಿಯಾಕಾಶದ ನಡುವಿನ ಮೌನದ ಕಸುವನ್ನೆಲ್ಲಾ ತಾನೊಬ್ಬಳೇ ಆಪೋಶಿಸಿಕೊಂಡಂಗೆ ಹರಿಯುತ್ತಿದ್ದಳು. ಇವಳು ಸಿಡಿಲು, ಸದ್ದು, ಮೌನ, ಪ್ರತಾಪ, ಪ್ರವಾಹ ಎಲ್ಲವನ್ನೂ ಅಡಗಿಸಿಟ್ಟುಕೊಂಡು ಗುಪ್ತಗಾಮಿನಿಯಾಗಿ ಹರಿಯುವ ಶಕ್ತಿಯನ್ನು ಹೆಂಗೆ ಸಿದ್ಧಿಸಿಕೊಂಡಳು ...!?

ಅಲ್ಲದೆ 'ದಿಗಂಬರನೂ ಶ್ವೇತಾಂಬರಿಯೂ' ಎಂಬ ಕಥೆಯಲ್ಲಂತೂ ದೊಡ್ಡೆಯಂತಹ ಮೂಕ ಪ್ರಾಣಿಯನ್ನು ಕೇಂದ್ರವಾಗಿಸಿಕೊಂಡು ಇಡೀ ಕಥೆಯನ್ನು ಹೆಣೆದಿರುವುದು ಚಿಕ್ಕಣ್ಣನವರ

ಸೃಜನಶೀಲತೆಗೆ ಹಿಡಿದ ಕನ್ನಡಿ. ಇಲ್ಲಿ ಶ್ವೇತಾಂಬರೆಯಾಗಿ ದೊಡ್ಡೆ ಎಂಬ ಹಸುವನ್ನು ದಿಗಂಬರ ಜ್ಞಾನಿಯಾಗಿ ದಾಸಯ್ಯ, ತಮ್ಮಣ್ಣನನ್ನು ಅರ್ಥೈಸಲಾಗಿದೆ. ಹೆಣ್ಣಿನ ಜೀವನದ ಸಾರ್ಥಕತೆಯ ಸಂಕೇತವಾಗಿ ದೊಡ್ಡೆಯನ್ನು ಚಿತ್ರಿಸಲಾಗಿದೆ. ಇದೆ ಕಥೆಯಲ್ಲಿನ ಚಿಕ್ಕಿಯ ಮೂಕ ಸೇವೆ, ಗಾಣದ ಎತ್ತಿನಂಗೆ ದುಡಿಯುವಂತೆ ಎನ್ನುವಲ್ಲಿ ದೊಡ್ಡೆಗೂ ಚಿಕ್ಕಿಗೂ ಹೋಲಿಸುವುದು ಮತ್ತು ದೊಡ್ಡೆ ಎಂಬ ಹಸುವಿನ ಚಿತ್ರಣವನ್ನು ಶೀಲತ್ವದ ನಂಬಿಕೆ, ಸ್ತ್ರೀಸಹಜ ಕ್ರಿಯೆಗಳ ಕುರಿತ ಆಲೋಚನೆ, ಒಬ್ಬ ಸ್ತ್ರೀ ಎಂಬಂತೇ ಚಿತ್ರಿಸಿರುವುದು ಮನಮುಟ್ಟುವ ಹಾಗಿದೆ.

ಚಿಕ್ಕಣ್ಣನವರ 'ಬಿಳಿಲು ಬಿಟ್ಟ ಬದುಕು', 'ಒಡಲುರಿ', 'ವಾಸನಾಮಯ ಬದುಕಿನ ಆಚೆ ಈಚೆ', 'ಮನಸು ಮುಗಿಲು', 'ಅಗಾಂತರ', 'ಮುಂಗಾರು ಮಳೆಯ ಸಂಜೆ', 'ಬೆಳ್ಳಕ್ಕಿ ಸಾಲು' 'ಸುಮ್ಮಾನ' 'ಅನ್ಯ', ನಿಶ್ಯಬ್ದವಾದವನು', 'ದಾವರ', 'ಜಪದಕಟ್ಟೆ', 'ಬೆವರಿನ ವಾಸನೆ', 'ನಿಚ್ಚಯ' ಮುಂತಾದ ಕಥೆಗಳಲ್ಲಿ ಪ್ರಕೃತಿ ಮತ್ತು ಹೆಣ್ಣು ಪುರುಷನಿಂದ ಬೇರ್ಪಟ್ಟ ಅಂಗಗಳಾಗಿವೆ. ಪುರುಷನ ಸುತ್ತಲೂ ಗುರುತಿಸಿಕೊಳ್ಳುತ್ತವಾದರೂ ಆತನ ಒಳಗಿಲ್ಲ. ಇಲ್ಲಿ ಬರುವ ಸ್ತ್ರೀಪಾತ್ರಗಳು ಮತ್ತು ಪ್ರಕೃತಿಯ ವಿವರಗಳು ಪರಸ್ಪರ ಭಿನ್ನ ನೆಲೆಯವಾದರೂ ಸಹ ಅವುಗಳ ಒಳಗೊಂದು ಆತ್ಮದ ಅನುಸಂಧಾನವಿದೆ. ಇದರಿಂದ ಅವು ಪುರುಷ ಸಮಾಜದ ಪೋಷಕಗಳಾಗುತ್ತವಾದರೂ ಅದೇ ಸಂದರ್ಭದಲ್ಲಿ ಸಂಹಾರಕ ಶಕ್ತಿಗಳಾಗಿಯೂ ಧ್ವನಿಸುವುದನ್ನು ಕಾಣಬಹುದು.

ಇಲ್ಲಿನ ಗಂಡು ಹೆಣ್ಣಿನ ಸಂಬಂಧ ಕೆ.ಎಸ್. ನರಸಿಂಹಸ್ವಾಮಿಯವರ ಕಾವ್ಯ ಜಗತ್ತಿನಲ್ಲಿ ಕಾಣುವ ಭಾವ ಸಂಬಂಧದ ಪರಿಯದು; ತಂದೆ ಗೈರುಹಾಜರು, ತಾಯಿ ಪೊರೆವವಳು. ಇದು ಈ ದೇಸೀ ಮೂಲದ ಸಂಸ್ಕೃತಿ ವಿಶೇಷ. ಬೈರಪ್ಪ, ಅನಂತಮೂರ್ತಿ ಇವರ ಕಾದಂಬರಿಗಳಲ್ಲಿ ತಾಯ್ತನದ ಮೂಲದಲ್ಲಿ ಪಾವಿತ್ರ್ಯತೆಯ ಪ್ರಶ್ನೆ ಎತ್ತಿ ವ್ಯಕ್ತಿತ್ವದ ಅಸ್ತಿತ್ವವನ್ನು ಕುರಿತ ಚಿಂತನೆಗಳು ಬೆಳೆದರೆ ಇಲ್ಲಿಯ ಜಗತ್ತು ನಂಬಿಕೆಯನ್ನು ಪಾವಿತ್ರ್ಯತೆಯ ಮೂಲದಲ್ಲಿ ಪರಿಭಾವಿಸಿದ್ದು, ಪೋಷಿಸಿದ್ದು ಎಷ್ಟೇ ಬಂಗ ಬೇಗುದಿಗಳು ಬಂದರೂ ಹೆಣ್ಣಿನ ಗೌರವವನ್ನು ಕೀಳಾಗಿಸುವಂತಹ ಆಲೋಚನೆಗಳು ಇಲ್ಲಿ ಸುಳಿಯುವುದಿಲ್ಲ.

ಇಂತಹ ಶಕ್ತಿಗಳನ್ನೇ 'ಸಾಂಸ್ಕೃತಿಕ ಕ್ರಿಯಾತ್ಮಕ ಪ್ರೇರಕ ಮಾದರಿ' ಎಂದು ಕರೆಯಬಹುದು. ಇಂತಹ ಸಾಂಸ್ಕೃತಿಕ ಕ್ರಿಯಾತ್ಮಕ ಪ್ರೇರಕ ಮಾದರಿಯನ್ನು ಹುಟ್ಟುಹಾಕುವ ನಿಟ್ಟಿನಲ್ಲಿ ಸ್ತ್ರೀಪರ ಚಳುವಳಿಗಳು ಗಣನೀಯ ಕೊಡುಗೆಯನ್ನು ನೀಡಿವೆ ಎಂದೇ ಹೇಳಬಹುದು. ಇಂತಹ ಚಲನಶೀಲತೆಯಿಂದಲೇ ಸಾಮಾಜಿಕ ಪರಿವರ್ತನೆಯಲ್ಲಿ ಹಾಗೂ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ

ಸ್ತ್ರೀಯರು ಮಹತ್ವದ ಪಾತ್ರವನ್ನು ವಹಿಸುತ್ತಾರೆ. ಇದಕ್ಕೆ ಹಮೀದಾಯಣದ ಕಥೆಯ ಈ ಮಾತುಗಳನ್ನು ಉಲ್ಲೇಖಿಸಬಹುದು.

> "ಇಂಥ ಹೊತ್ತು ಹಮೀದುಗೆ ಹೆಂಡತಿಯೇ ಪರಮ ಆಸರೆ, ಚಟುವಟಿಕೆ ನಗುಗಳನ್ನು ಕಬಳಿಸುವಷ್ಟು ಇಂತಹ ಹಾಳು ಅವಸರ, ಪೆದ್ದುತನಗಳು ತನ್ನನ್ನು ಮುತ್ತುವಾಗ ಚಿಟಿಕೆ ಹೊಡೆದಂತೆ ಪರಿಹರಿಸಿಬಿಡುವ ಜಾಣೆ ಅವಳು. ಅದಕ್ಕಾಗಿಯೇ ಅವಳನ್ನು ಹೆಚ್ಚು ಹೊತ್ತು ಬಿಟ್ಟಿರಲಾಗುವುದಿಲ್ಲ"[೧೧]

ಹೆಣ್ಣಿನ ಇಂತಹ ಶಕ್ತಿಯನ್ನೇ ಕುರಿತು ಜಿ.ಪಿ.ರಾಜರತ್ನಂರವರು ಹೀಗೆ ಹೇಳುತ್ತಾರೆ.

"ಸಿಡಿಯೋ ಮದ್ದಿನ ಸುಟ್ಟಾಕ್ಟಂಗೆ
ಮಡಗಿದ್ದೇನೆ ಕೋಪ –
ನನ್ ತಾಪತ್ರೇನ್ ಉಡಾಯ್ಸತ್ತೈತೆ
ನನ್ ಪುಟ್ನಂಜೀ ರೂಪ"
"ಪುಟ್ನಂಜಿ ನನಗೌಳೆ ಪಾಯ್ಸ ಪರಮಾನ್ನ
ಯೆಂಡ್ ಯಾಕ್ ಅದರ್ಮುಂದೆ ಅಳಸಿದ ತಂಗಳನ್ನ"

– *ಜಿ.ಪಿ.ರಾಜರತ್ನಂ*

ಹೀಗೆ ಚಿಕ್ಕಣ್ಣನವರ ಕಥೆಗಳಲ್ಲಿ ಪ್ರಕೃತಿ ಮತ್ತು ಸಂಸ್ಕೃತಿಗಳೆರಡೂ ನೆಲೆಯಲ್ಲಿ ಸ್ತ್ರೀಯ ಪಾತ್ರಗಳು ಅನಾವರಣಗೊಂಡಿರುವುದನ್ನು ಕಾಣಬಹುದು.

## ಅಡಿ ಟಿಪ್ಪಣಿ

| | | | |
|---|---|---|---|
| ೧. | ಕಂಡೇರಿ | : | ಕಾ.ತ. ಚಿಕ್ಕಣ್ಣ, ಪುಟ–೧೫ |
| ೨. | ಕಂಡೇರಿ | : | ಕಾ.ತ. ಚಿಕ್ಕಣ್ಣ, ಪುಟ–೧೫ |
| ೩. | ಕಂಡೇರಿ | : | ಚಿಕ್ಕಣ್ಣ, ಪಕಾ.ತ. ುಟ–೧೭ |
| ೪. | ಕಂಡೇರಿ | : | ಕಾ.ತ. ಚಿಕ್ಕಣ್ಣ, ಪುಟ–೧೭ |
| ೫. | ಕಂಡೇರಿ | : | ಕಾ.ತ. ಚಿಕ್ಕಣ್ಣ, ಪುಟ–೧೮ |
| ೬. | ಕಂಡೇರಿ | : | ಕಾ.ತ. ಚಿಕ್ಕಣ್ಣ, ಪುಟ–೧೮ |
| ೭. | ಕಂಡೇರಿ | : | ಕಾ.ತ. ಚಿಕ್ಕಣ್ಣ, ಪುಟ–೧೭ |
| ೮. | ಕಂಡೇರಿ | : | ಕಾ.ತ. ಚಿಕ್ಕಣ್ಣ, ಪುಟ–೨೬೦ |
| ೯. | ಕಂಡೇರಿ | : | ಕಾ.ತ. ಚಿಕ್ಕಣ್ಣ, ಪುಟ–೯೬ |
| ೧೦ | ಕಂಡೇರಿ | : | ಕಾ.ತ. ಚಿಕ್ಕಣ್ಣ, ಪುಟ–೬೦ |
| ೧೧ | ಕಂಡೇರಿ | : | ಕಾ.ತ. ಚಿಕ್ಕಣ್ಣ, ಪುಟ–೧೦೬ |

## ಅಧ್ಯಾಯ – ೩

## ಪುರುಷಾಧಿಕಾರದ ಅನಾವರಣ

ಇತಿಹಾಸಗಳು ಮುಚ್ಚಿದ ಗೋರಿಗಳು, ನಾಡಿನ ಚಿಂತನೆ, ಸಂಸ್ಕೃತಿಯ ಹಾದಿಯನ್ನು ರೂಪಿಸಲು ಬೇಕಾದ ಅನೇಕ ಐತಿಹ್ಯಗಳನ್ನು ಒದಗಿಸುವ ಒಡಲುಗಳು, ಭಾರತೀಯ ಇತಿಹಾಸದ ಜನಪ್ರಿಯ ಕಲ್ಪನೆಗಳಲ್ಲಿ ಭಾರತೀಯ ಮಹಿಳೆ ಅತಿರೇಕದ ದ್ವಂದ್ವಗಳಲ್ಲಿ ರೂಪಿಸಲ್ಪಟ್ಟಿದ್ದಾಳೆ. ಅವಳು ಒಂದೋ ಹತಭಾಗಿನಿ ಅಥವಾ ನಾಯಕಿ, ಮಾಟಗಾತಿ ಇಲ್ಲವೇ ದೇವತೆ, ಕುಟುಂಬಿನಿ ಇಲ್ಲವೇ ರಾಷ್ಟ್ರನಾಯಕಿ. ಇಂದು ಭಾರತೀಯ ಸ್ತ್ರೀವಾದ ತೀವ್ರವಾಗಿ ಎದುರಿಸುತ್ತಿರುವ ತೊಡಕುಗಳಿವು.

ಈ ಎರಡೂ ಅತಿರೇಕಗಳನ್ನು ತಲುಪಲಾಗದ, ತಲುಪಲೇಬೇಕಾದ ಎಂದೇನೂ ಒತ್ತಡವಿಲ್ಲದ ಮಿಲಿಯನ್ ಭಾರತೀಯ ಮಹಿಳೆಯರನ್ನು ಆಳುತ್ತಿರುವ ಈ ರೂಪಕಗಳನ್ನು ಛಿದ್ರಗೊಳಿಸಿದರೆ ಹೊರಬರುವ ಹೆಣ್ಣಿನ ಬದುಕೇ ಬೇರೆಯದು. ಅವಳ ಸ್ತ್ರೀತ್ವ, ಲೈಂಗಿಕತೆ, ಸಾಂಸ್ಕೃತಿಕ ಒಡನಾಟವನ್ನು ನಿರ್ಮಿಸುತ್ತಿರುವ ಶಕ್ತಿಗಳು ಅನೇಕವು; ಅವು ಅಗೋಚರ ಶಕ್ತಿಗಳು.

ಸಾವಿರಾರು ಬಾರಿ ಸತಿಯಾಗಿ ವಿಧವೆಯಾಗಿ, ಬಾಲವಧುವಾಗಿ, ಭಾರತಮಾತೆಯಾಗಿ ಲೈಂಗಿಕತೆಯ ಸಾವನ್ನು ಕಂಡು ಇತಿಹಾಸದ ಗೋರಿಯಲ್ಲಿ ಸ್ಥಿರವಾಗಿ ಸ್ಥಾಪಿಸಲ್ಪಟ್ಟ ಮೇಲೂ ಪುರುಷಾಧಿಕಾರ ಮತ್ತೆ ಮತ್ತೆ ಹೆಣ್ಣನ್ನು ಹಿಂಸಿಸುತ್ತಲೇ ಇದೆ. ಮಹಿಳೆಯರ ಮೇಲೆ ಆಗುತ್ತಿರುವ ವಾಸ್ತವ ಶೋಷಣೆಗಳನ್ನು ಸಂಕೇತಗಳ ಮೂಲಕ ನಿಭಾಯಿಸುವ ದುರ್ಬಲತೆಯನ್ನು ಪುರುಷಾಧಿಕಾರದ ಪ್ರಭುತ್ವ ಪ್ರದರ್ಶಿಸುತ್ತಿದೆ. ಹೆಣ್ಣಿನ ದೇಹವು ಹಿಂಸೆಯನ್ನು ಅನುಭವಿಸುವುದಕ್ಕೆ ಇರುವುದೆಂದು ತಿಳಿದು ಆ ದೇಹದ ಮೇಲೆ ದಿನಾ ದಿನಾ ನಡೆಯುವ ಶೋಷಣೆಗಳು ಜನರ ಕಲ್ಪನೆಯಲ್ಲಿ ನಗಣ್ಯವಾಗಿಬಿಟ್ಟಿದೆ.

### ಶೋಷಣೆ ಮತ್ತು ಮೌಢ್ಯತೆಯ ಕ್ರೌರ್ಯ ಹಾಗೂ ಅದರ ವಿರುದ್ಧ ಪ್ರತಿಭಟನೆ

ಪುರುಷ ಪ್ರಧಾನ ಸಮಾಜದಲ್ಲಿ ಶತಶತಮಾನಗಳಿಂದ ಅತ್ಯಂತ ಹೆಚ್ಚಿನ ಶೋಷಣೆಗೆ ಗುರಿಯಾಗಿರುವ ಸಾಮಾಜಿಕ ಘಟಕವೆಂದರೆ ಅದು ಹೆಣ್ಣು ಮಾತ್ರ. ಸ್ತ್ರೀ ಸಮಾಜ ನಿರಂತರವಾಗಿ ಎದುರಿಸುತ್ತಿರುವ ಹತ್ತು ಹಲವು ಸಮಸ್ಯೆಗಳು ಸವಾಲುಗಳು ಒಂದು ರೀತಿಯಲ್ಲಿ ಶಮನವಾಗುತ್ತಿವೆ ಎಂದುಕೊಳ್ಳುತ್ತಿರುವಂತೆಯೇ ಹತ್ತು ನೂರಾಗಿ ದುತ್ತೆಂದು ಮತ್ತೆ ಬೇರೆಯದೇ ರೂಪದಲ್ಲಿ ಎದುರಾಗುತ್ತಿರುತ್ತವೆ.

ಪಿತೃಪ್ರಧಾನ ವ್ಯವಸ್ಥೆ ಎಂದರೆ ಕುಟುಂಬ ಕೇಂದ್ರ ವ್ಯವಸ್ಥೆ, ಜಾತಿ, ಧರ್ಮ, ಅಂತಸ್ತು ಎಂಬೆಲ್ಲ ಸಂಗತಿಗಳೂ ಅಲ್ಲಿ ತಳುಕುಹಾಕಿಕೊಂಡು ಎಲ್ಲಾ ನೆಲೆಯಿಂದಲೂ ಹೆಣ್ಣನ್ನು ಶೋಷಿಸುತ್ತಿರುತ್ತವೆ. ವ್ಯಕ್ತಿ ಮತ್ತು ಸಂಸ್ಕೃತಿಯ ಜಂಟಿ ಕ್ರೌರ್ಯಕ್ಕೆ ಒಳಗಾದ ಪಾತ್ರಗಳು ಪಿತೃಪ್ರಧಾನ ಚೌಕಟ್ಟು ಹಾಕುವ ನಡತೆಯ ನಿಯಮಗಳಿಂದ ಸ್ವಲ್ಪ ಆಚೀಚೆ ಸರಿದರೂ ಮುಗ್ಧ ಹೆಣ್ಣುಗಳು ಬಂದು ತಲುಪುವುದು ದುರಂತದ ಕಡೆಗೆ. ಇಂತಹ ಪಿತೃಪ್ರಧಾನ ವ್ಯವಸ್ಥೆಯ ಅನೇಕ ಮಜಲುಗಳೇ ಕಾ.ತ. ಚಿಕ್ಕಣ್ಣನವರ ಕಥೆಗಳ ಕೇಂದ್ರ ವಸ್ತು. ಅವರ ಬಹಳಷ್ಟು ಕಥೆಗಳಲ್ಲಿ ಬಡತನ, ಅಜ್ಞಾನ, ಕತ್ತಲು, ಶೋಷಣೆ, ಶೋಷಣೆಯ ಹಲವು ಆಯಾಮಗಳೇ ಹಾಸುಹೊಕ್ಕಾಗಿರುವುದನ್ನು ಕಾಣಬಹುದು. ಮೇಲ್ಜಾತಿ ಮತ್ತು ಮೇಲ್ವರ್ಗದಿಂದ ಶೋಷಿಸಲ್ಪಡುವ ಕೆಳಜಾತಿ, ಕೆಳವರ್ಗದವರ ಬದುಕಿನ ವಾಸ್ತವವು ಇಲ್ಲಿ ಸಂಕೀರ್ಣ ರೀತಿಯಲ್ಲಿ ಚಿತ್ರಿತವಾಗಿದೆ.

ಪಿತೃ ಪ್ರಧಾನ ವ್ಯವಸ್ಥೆ ಅನ್ನುವುದು ಒಂದು ಏಕರೂಪತೆಯಿಂದ ಕೂಡಿರುವಂಥದ್ದಲ್ಲ. ಕಾಲ, ದೇಶ, ಸಂದರ್ಭ, ಸಂಸ್ಕೃತಿ ಬದಲಾದಂತೆ ಅದೂ ಬದಲಾಗುತ್ತದೆ. ಧರ್ಮ, ಹಣ, ಜಾತಿ, ವರ್ಗ, ದರ್ಪ ಮುಂತಾದ ಅಧಿಕಾರಯುತ ಸಂಗತಿಗಳೊಡನೆ ಕರಾಳ ರೀತಿಯಲ್ಲಿ ತಳುಕು ಹಾಕಿಕೊಂಡಿರುತ್ತದೆ. ಇವುಗಳನ್ನು ಶೋಧಿಸುವುದನ್ನೇ ಮುಖ್ಯವಾಗಿಸಿಕೊಂಡ ಸ್ತ್ರೀವಾದಿ ವಿಮರ್ಶೆಗೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಮಹತ್ವ ತಂದುಕೊಡುವ ಅಂಶವೆಂದರೆ ಸಮಾಜದಲ್ಲಿ ನಡೆಯುವ ರಾಜಕಾರಣ ಮತ್ತು ಕುಟುಂಬದ ಒಳಗೇ ನಡಯುವ ಕ್ರೌರ್ಯದ ರಾಜಕಾರಣ. ಗಂಡ ಹೆಂಡತಿಯನ್ನು ದೈಹಿಕವಾಗಿ, ಮಾನಸಿಕವಾಗಿ ಹಿಂಸಿಸುವುದು, ಬೈಗುಳಗಳ ಮುಖಾಂತರ ಸಮಾಜದಲ್ಲಿ ಸ್ತ್ರೀಯನ್ನು ಅವಮಾನಗೊಳಿಸುವುದು, ಅಭಿವ್ಯಕ್ತಿಯ ಸ್ವಾತಂತ್ರ್ಯವನ್ನೇ ಹತ್ತಿಕ್ಕುವ ಹುನ್ನಾರಗಳು, ಗಂಡಿಗಷ್ಟೇ ಮೀಸಲಿರುವ ಕೆಲವು ಸಾಮಾಜಿಕ ಸ್ಥಾನಮಾನಗಳು, ಮದುವೆ ಎಂಬ ವ್ಯವಹಾರ, ದಾಂಪತ್ಯದಲ್ಲಿನ ಬಿರುಕು, ಅದಕ್ಕೆ ಪರ್ಯಾಯವೆಂಬಂತೆ ಅನೈತಿಕ ಸಂಬಂಧಗಳು, ಮಾನಸಿಕ ತೊಳಲಾಟದಲ್ಲಿ ನರಳುವ ಹೆಂಗಸರು.

ಅತ್ತೆ–ಸೊಸೆಯ ಜಗಳ ಹೀಗೆ ಮತ್ತು ಹಲವು ರೀತಿಯ ಸ್ತ್ರೀಯರ ಹಿಂಸೆಗಳು ಮೊದಲಿನಿಂದಲೂ ಕಂಡುಬರುವಂತದ್ದೇ ಆಗಿದೆ. ಇಂತಹ ಅನೇಕ ನಿದರ್ಶನಗಳು ಕುವೆಂಪುಯಿಂದ ಹಿಡಿದು ಇಂದಿನ ಲೇಖಕ/ಲೇಖಕಿಯರ ಎಲ್ಲ ಕತೆಗಳಲ್ಲಿಯೂ ಕಾಣಬಹುದು. ಅಂತಹ ಸ್ತ್ರೀ ಶೋಷಣೆಯೇ ಚಿಕ್ಕಣ್ಣನವರ ಅನೇಕ ಕಥೆಗಳ ವಸ್ತು.

'ಸತ್ಯವತಿ' ಕಥೆಯಲ್ಲಿನ ಸತ್ಯವತಿ, 'ಜಪದಕಟ್ಟೆ'ಯ ರುಕ್ಮಿಣಿ ಮತ್ತು ಶಾರದೆ, 'ಕರಗವ್ವ' ಕಥೆಯ ಕರಗವ್ವ, 'ನಿಶ್ಚಯ'ದ ಗೀತ, 'ತೆರೆ ಸರಿದಂತೆ' ಕಥೆಯ ಮಾದಿ, 'ಒಡಲುರಿ'ಯ ಸಣ್ಣಿಂಗಿ,

'ಓಡುವ ಗಿಡಮರಗಳೊಂದಿಗೆ' ಕಥೆಯ ನಾಯಕಿ, 'ಹಸಿರು ಬೆರಳಿನುಂಗುರ' ಕಥೆಯ ಲಕ್ಷ್ಮಿ ಹೀಗೆ ಅನೇಕ ಪಾತ್ರಗಳು ಶೋಷಣೆಯಿಂದ ಬಳಲಿದವೇ. ಪುರುಷಾಧಿಕಾರದ ಅತಿಮಾನುಷ ಕ್ರೌರ್ಯಕ್ಕೆ ಬಲಿಯಾದವರೇ.

ಜೋರು ಜೂರತ್ತಿನ ಘಾಟಿ ಹೆಂಗಸಾದ ಸತ್ಯವತಿಯನ್ನೇ ಪಳನಿಸಾಮಿ "ನೀನು ಮಾ ಸಾಚ್ವಾದ ಹೆಣ್ಣು? ತೋರುಸ್ತೀನಿ ತಾಳು ನಿಂಗೆ"[7] ಎಂದು ಅವಳ ಮೈ ಮೇಲೆ ಬೀಳುವುದು ಒಂಟಿ ಹೆಣ್ಣಿನ ಮೇಲೆ ಪುರುಷ ಹದ್ದಿನ ಕಣ್ಣು ಸದಾ ಹಾಳು ಮಾಡುವುದಕ್ಕಾಗಿ ಹೊಂಚು ಹಾಕುತ್ತಿರುತ್ತದೆ. ಈ ಅಚಾನಕ್ ಆಕ್ರಮಣಕ್ಕೆ ಪ್ರತಿಯಾಗಿ ಸಂಪಿಗೆ ಗಿಡದ ರೆಂಬೆಗಳನ್ನು ಮುರಿದುಕೊಂಡು ಬಾರಿಸುವಿಕೆ, ಸಾಯುವ ಹಾಗೆ ಹೊಡೆಯುವುದು, ಅವನನ್ನು ಆಸ್ಪತ್ರೆಗೆ ಕೊಂಡೊಯ್ದು ನಂತರವೂ ಮರಕ್ಕವನನ್ನು ಗುದ್ದಿ ಗುದ್ದಿ ಅದರೊಂದಿಗೆ ಮಾತನಾಡುವುದು ಪ್ರತಿಭಟನೆಯ ಕ್ರಮವಾಗಿದೆ. ಹುಚ್ಚಿಯಾದರೂ, ಹುಚ್ಚಿಯಂತಿದ್ದರೂ ತನ್ನನ್ನು ತಾನು ಕಾಪಾಡಿಕೊಳ್ಳುವ ಶಕ್ತಿಯಿರುವವಳು ಸತ್ಯವತಿ.

ತಾಯ್ತನ ಅನ್ನುವ ಸಮಸ್ಯೆ ಸ್ತ್ರೀಪ್ರಜ್ಞೆಯನ್ನು ಆಳವಾಗಿ ಪ್ರಭಾವಿಸುವ ಸಮಸ್ಯೆಗಳಲ್ಲೊಂದು. ಈ ಸಮಸ್ಯೆಗೆ ಹಲವಾರು ಆಯಾಮಗಳಿರುವುದರಿಂದ ಅದಕ್ಕೆ ಸುಲಭ ಪರಿಹಾರಗಳಿಲ್ಲ. ತಾಯ್ತನ ಇಲ್ಲದಿದ್ದರೆ ಹೆಣ್ಣಿನ ಬದುಕು ನಶ್ವರ. ಅವಳಿಗೆ ಎಲ್ಲಿಯೂ ಮೋಕ್ಷ ದೊರೆಯದು ಎನ್ನುವ ಧಾರ್ಮಿಕತೆ, ಪಾರಂಪರಿಕ ಸಂಕಥನಗಳು ಆ ಹೆಣ್ಣಿನ ಸುಖ ಸಂತೋಷಗಳನ್ನು ಹೇಗೆ ಬಲಿ ತೆಗೆದುಕೊಂಡುಬಿಡುತ್ತವೆ ಎಂಬುದನ್ನು 'ತೆರೆ-ತೆರೆ ಸರಿದಂತೆ' ಕಥೆಯಲ್ಲಿನ ಮಾದಿ ಪಾತ್ರ ಮನಮುಟ್ಟುವಂತೆ ಚಿತ್ರಿತವಾಗಿದೆ.

ಬಡ ಹೆಂಗಸು ಮಾದಿ ಮಕ್ಕಳಾಗದ ತನ್ನ ಗಂಡನ ಬಗ್ಗೆ ಅಸಮಾಧಾನ ಹೊಂದಿ ಮನೆ ಕೆಲಸಕ್ಕೆಂದು ಹೋಗುತ್ತಿದ್ದಾಗ ಮಗುವಿಗೋಸ್ಕರವಾಗಿಯೇ ಯಜಮಾನನಾದ ಯಲ್ಲಪನನ್ನು ವರಿಸಿ ಗರ್ಭಿಣಿಯಾಗುತ್ತಾಳೆ. ಯಲ್ಲಪ್ಪ ಹೆಂಡತಿಯನ್ನು ಕಳೆದುಕೊಂಡು ಮಕ್ಕಳಿಂದಲೂ ದೂರವಾಗಿರುವವನು. ಒಬ್ಬಂಟಿಯಾಗಿ ಅವನ ಮನೆ ಕೆಲಸಕ್ಕೆ ಬರುತ್ತಿದ್ದ ಮಾದಿಯನ್ನು ನಂಬಿಸಿ ಮೋಹಕೂಪಕ್ಕೆ ಬಳಸಿಕೊಂಡು, ಹೆಂಡತಿಯಂತೆಯೇ ಮೆರೆಸಿ ಇವರಿಬ್ಬರ ರಾಸಲೀಲೆಯನ್ನು ಕಣ್ಣಾರೆ ನೋಡಿದ ಮಾದಿಯ ಗಂಡ ಮಾದಿಗೆ ಚೆನ್ನಾಗಿ ಬೈದು ಹೊಡೆದು ತಾನೇ ಮನೆ ಬಿಟ್ಟು ಹೊರಟು ಹೋಗುತ್ತಾನೆ. ತನ್ನಲ್ಲಿನ ನ್ಯೂನ್ಯತೆಯನ್ನು ಅರಿತಿದ್ದೂ ಹೆಂಡತಿಯ ಮೇಲೆ ಎಗರಾಡುವುದು ಪುರುಷ ಪ್ರಧಾನ ವ್ಯವಸ್ಥೆಯ ನೈಜ ಚಿತ್ರಣವಾಗಿ ಗೋಚರವಾಗುತ್ತದೆ.

ಇನ್ನು ಯಲ್ಲಪ್ಪನಂತೂ ಮಾದಿಯನ್ನು ನಂಬಿಸಿ, ಗರ್ಭಿಣಿ ಮಾಡಿ ಅವಳಿಗೊಂದು ಮಾತೂ ಹೇಳದೆ ಊರು ಬಿಟ್ಟು ಹೊರಟು ಹೋಗುತ್ತಾನೆ. ಹೆಣ್ಣನ್ನು ಪುರುಷ ತನಗೆ ಬೇಕಾದಾಗ ಆಲಂಗಿಸಿ, ಬೇಡವಾದಾಗ ಒಬ್ಬಂಟಿಯಾಗಿ ಬಿಟ್ಟು ಹೋಗುವ ದೌರ್ಜನ್ಯವನ್ನು ಕಾಣಬಹುದು. ಯಲ್ಲಪ್ಪ ಮತ್ತು ಆಕೆಯ ಗಂಡ ಇಬ್ಬರೂ ಮಾದಿಯನ್ನು ಅರ್ಥಮಾಡಿಕೊಳ್ಳುವುದೇ ಇಲ್ಲ. ದೈಹಿಕವಾಗಿ ಒಬ್ಬ ಶಿಕ್ಷಿಸಿದರೆ, ಇನ್ನೊಬ್ಬ ದೈಹಿಕವಾಗಿ ಮತ್ತು ಮಾನಸಿಕವಾಗಿ ಎರಡೂ ರೀತಿಯಲ್ಲೂ ಹಿಂಸಿಸಿ ಹೊರಟು ಹೋಗುತ್ತಾನೆ. ಮಗುವಿಗಾಗಿ ಮಾಡಿದ ಹಾದರತನದಿಂದಾಗಿ ಅವಳ ಸ್ಥಿತಿ ಗಂಡನೂ ಇಲ್ಲದೆ, ಮಗುವಿನ ತಂದೆಯೂ ಇಲ್ಲದೆ ಮಾನಸಿಕವಾಗಿ ಜರ್ಜರಿತಳಾಗುತ್ತಾಳೆ.

ಇಲ್ಲಿ ಗಂಡ ಮಾದಿಯನ್ನು ಬಿಟ್ಟು ಹೋಗಲು ಬಲವಾದ, ನೈತಿಕವಾದ ಕಾರಣವಿತ್ತು. ಆದರೆ ಯಲ್ಲಪ್ಪ ಬಿಟ್ಟುಹೋಗಲು ಕಾರಣ ಅಷ್ಟು ಕಠಿಣವಾಗಿರಲಿಲ್ಲ. ಮಾದಿಯನ್ನು ಮದುವೆಯಾಗಿ ಹೇಗೋ ಅವಳಿಗೆ, ಅವಳ ಗರ್ಭದಲ್ಲಿರುವ ತನ್ನ ಕುಡಿಗೆ ಆಸರೆಯಾಗಬಹುದಿತ್ತು. ಅಷ್ಟೂ ಇಲ್ಲದಿದ್ದರೂ ತನ್ನ ಮಗುವಿನ ತಾಯಿಯಾಗುವವಳು ಎಂದಾದರೂ ಅವಳಿಗಷ್ಟು ಆಸ್ತಿಯನ್ನೋ, ಹಣವನ್ನೋ ಕೊಡಬಹುದಾಗಿತ್ತು. ಅದನ್ನು 'ಮನೆಗೆ ಸೇರಿಸಬೇಡಿರೆಂದು' ಪಕ್ಕದ ಮನೆಯ ಹುಡುಗರಿಗೆ ಹೇಳಿ ಹೋದದ್ದು ಅವಳಿಗೆ ಅತ್ಯಂತ ಅವಮಾನದ ಸಂಗತಿಯಾಗುತ್ತದೆ.

ಗಂಡನಿಂದ ಯಲ್ಲಪ್ಪನಿಂದ ಆದ ನೋವಿನಿಂದ ಸಿಡಿದೆದ್ದ ಮಾದಿ ಬಂಡಾಯವೇಳುತ್ತಾಳೆ. ಅವಳ ಬಂಡಾಯದ ಪರಿ ಕ್ರೂರವಾಗಿದ್ದರೂ ಸಹ ತನಗಾದ ಶೋಷಣೆಯ ವಿರುದ್ಧ ಆಕ್ರೋಶಭರಿತಳಾಗುತ್ತಾಳೆ. ಮಗುವಿಗಾಗಿ ಅಲ್ಲವೆ ತಾನು ತನ್ನ ತನವನ್ನು ಕಳೆದುಕೊಂಡದ್ದು ಎಂದು ಯೋಚಿಸಿ 'ಕೃತಜ್ಞತೆಯೇ ಇಲ್ಲದವರ ಪಿಂಡ ನನ್ನ ಹೊಟ್ಟೆಯಲ್ಲಿ ಯಾಕೆ ಬೆಳೆಯಬೇಕೆಂದು' ಹೊಟ್ಟೆಯನ್ನೇ ಹಿಸುಕಿಕೊಳ್ಳುವುದು ಹೆಣ್ಣೊಬ್ಬಳ ಬಂಡಾಯದ ಸೆಲೆಯನ್ನು ತಿಳಿಸುತ್ತದೆ. "ಪಾಪಿ ಮುಂಡೇದು ಸಾಯ್ಲಿ"[೨] ಎಂಬಲ್ಲಿನ ಸಿಟ್ಟು, ನೋವು, ಹತಾಶೆ ಅವಳನ್ನು ಯಾವ ಮಟ್ಟಕ್ಕೆ ತೆಗೆದುಕೊಂಡು ಹೋಗುತ್ತದೆ ಎಂದರೆ ಯಾವುದಕ್ಕಾಗಿ ಹಂಬಲಿಸುತ್ತಿದ್ದಳೋ ಅದನ್ನೇ ತನ್ನ ಕೈಯಾರ ನಾಶಮಾಡುವ ಹಂತಕ್ಕೆ ಬರುತ್ತಾಳೆ. "ಅಳುತ್ತಿದ್ದವಳು ಅಳುತ್ತಲೇ ಸಾಗಿದಳು" ಎಂಬಲ್ಲಿ ಅಷ್ಟಕ್ಕೆ ಕುಸಿಯದೆ, ಸಾಯದೆ ತನ್ನ ತಪ್ಪನ್ನೇ ಮೆಟ್ಟಿಲು ಮಾಡಿಕೊಂಡು ಶುದ್ಧ ಜೀವನವನ್ನು ಕಟ್ಟಲು ಹತ್ತತೊಡಗಿದಳು.

ಪುರುಷರಿಗೆ ಅನ್ವಯಿಸಿದಂತೆ ವಿವಾಹ ಬಾಹಿರ ಲೈಂಗಿಕ ಸಂಬಂಧಗಳು ಅನೈತಿಕವೆನಿಸುವುದಿಲ್ಲ. ಆ ಸಂಬಂಧಗಳಲ್ಲಿ ವೇಶ್ಯೆಯಾಗಿರದ ಹೆಂಗಸು ಭಾಗವಹಿಸಿದರೂ ಅವಳೇ ಅಪರಾಧಿ ಗಂಡಲ್ಲ; ಪುರುಷನು ತನ್ನ ವಿವಾಹ ಬಾಹಿರ ಸಂಬಂಧಗಳನ್ನು ಮುಚ್ಚು ಮರೆಯಾಗೇನೂ ಇಡಬೇಕಾಗಿಲ್ಲ. ಹೆಮ್ಮೆಯಿಂದಲೇ ಪ್ರದರ್ಶಿಸುತ್ತಾನೆ. 'ಇಬ್ಬರನ್ನು, ಮೂವರನ್ನು ಆಳುವ ಗಂಡು ನಾ' ಎಂದು ಬೀಗುತ್ತಾನೆ. ಅದೊಂದು ಪೌರುಷತ್ವದ ಸಂಕೇತವೆನಿಸುತ್ತದೆ. ಇಂತಹ ಪೌರುಷತ್ವವನ್ನು ಪ್ರದರ್ಶಿಸುವುದಕ್ಕಾಗಿಯೇ ಈ ಮೊದಲೇ ಮನೆಯಲ್ಲಿ ವಿವಾಹಿತ ಪತ್ನಿ ಇದ್ದರೂ ಮಕ್ಕಳಾಗದ ನೆಪದಲ್ಲೋ ಇನ್ನಾವುದೇ ನೆಪದಲ್ಲೋ ಇನ್ನೊಂದು ಹೆಣ್ಣನ್ನು ಮದುವೆಯಾಗಿಯೋ ಅಥವಾ ಮದುವೆಯಾಗದೆಯೋ ಮನೆಗೆ ತಂದಿರಿಸಿಕೊಳ್ಳುತ್ತಾನೆ. ಆದರೆ ಅದೇ ಕೆಲಸವನ್ನು ಹೆಣ್ಣೊಬ್ಬಳು ಮಾಡಿದರೆ ಸಮಾಜದಿಂದ ಉಚ್ಚಾಟಿತಳಾಗುತ್ತಾಳೆ.

ಮಾದಿಯ ವಿಷಯದಲ್ಲೂ ಹಾಗೇ ಆದದ್ದನ್ನು ಗಮನಿಸಬಹುದು. ಹೆಂಡತಿಗೆ ಮಕ್ಕಳಾಗುವ ಸಾಮರ್ಥ್ಯ ಇಲ್ಲವೆಂದು ತಿಳಿದಾಕ್ಷಣ ಮಕ್ಕಳನ್ನು ಮಾಡಿಕೊಳ್ಳುವ ಸಲುವಾಗಿಯೇ ಬೇರೊಂದು ಮದುವೆಯಾಗುವುದೋ, ಮತ್ತೊಂದು ಹೆಣ್ಣಿನ ಸಹವಾಸವನ್ನೋ ಮಾಡುತ್ತಾನೆ ಗಂಡ. ಅದನ್ನು ಸಹಿಸಿಕೊಂಡೇ ಹೆಣ್ಣು ಬದುಕಬೇಕು. 'ಗಂಡಸು ಅವನು ಎಷ್ಟು ಜನರನ್ನಾದರೂ ಮಾಡಿಕೊಳ್ಳುತ್ತಾನೆ. ಹೆಣ್ಣು ಅದನ್ನು ಸಹಿಸಿಕೊಳ್ಳಬೇಕು. ಆದರೆ ತನಗೆ ಗಂಡನಿಂದ ಮಕ್ಕಳಾಗುವುದಿಲ್ಲ ಎಂದು ತಿಳಿದಾಗಲೂ ಹೆಣ್ಣೊಬ್ಬಳು ಆತನ ಹಾಗೆ ಮಾಡುವ ಹಾಗಿಲ್ಲ. ಬಂಜೆಯಾಗಿಯೇ ಲೋಕದ ನಿಂದನೆಗೆ ಗುರಿಯಾಗಬೇಕು. ಬಂಜೆತನ ಗಂಡನಲ್ಲಿದ್ದರೂ ಆ ಅಪವಾದವನ್ನು ತಾನೇ ಹೊತ್ತು ನಡೆಯುವುದು ಪತಿವ್ರತಾ ಧರ್ಮ ಎನಿಸಿಕೊಳ್ಳುತ್ತದೆ.

ಮಾದಿಯ ಗಂಡನೂ ಇದೇ ಮನೋವೃತ್ತಿಯನ್ನು ಹೊಂದಿದ್ದನು. ಹಾಗಾಗಿಯೇ ಮಾದಿ ಮತ್ತು ಯಲ್ಲಪ್ಪನ ಅಕ್ರಮ ಸಂಬಂಧವನ್ನು ಜೀರ್ಣಿಸಿಕೊಳ್ಳಲಾಗದೆ ಸಿಡಿದೆದ್ದು ಅವಳಿಗೆ ಹೊಡೆದು-ಬಡಿದು, ಬೈದು ಅವಮಾನಿಸಿ ಅದೂ ಸಾಲದೆಂದು ಅವಳನ್ನು ಬಿಟ್ಟೇ ಹೊರಟು ಹೋಗುತ್ತಾನೆ. ಗಂಡ ತಪ್ಪು ಮಾಡಿದಾಗ ಕ್ಷಮಿಸಿ ಕ್ಷಮಯಾಧರಿತ್ರಿಯಾಗಲೆಂದು ಹೇಳುವ ಸಮಾಜ ಪುರುಷನಿಗೂ ಹಾಗೆ ಭಾವಿಸುವಂತೆ ಎಲ್ಲೂ ಸೂಚಿಸುವುದೇ ಇಲ್ಲ. ಪುರುಷ ಪ್ರಧಾನ ವ್ಯವಸ್ಥೆಯ ಕರಾಳ ನೆರಳು ಚಾಚಿರುವುದೇ ಇಂತಹ ಸೂಕ್ಷ್ಮಾತಿಸೂಕ್ಷ್ಮ ವಿಷಯಗಳಲ್ಲಿ.

'ತೆರೆ ತೆರೆ ಸರಿದಂತೆ'ಯ ಮಾದಿಯಂತೆ 'ಕರಗವ್ವ' ಕಥೆಯಲ್ಲಿನ ಕರಗವ್ವ ತನ್ನ ಎರಡನೇ ಗಂಡ ಬಿಟ್ಟು ಹೋದಾಗ ಹತಾಶಳಾಗಲಿಲ್ಲ. ತನ್ನ ಮೊದಲನೇ ಗಂಡನನ್ನು ಬಿಟ್ಟು ಬಂದಿದ್ದರೂ ಸಹ ಎರಡನೆಯ ಗಂಡನ ಬಗ್ಗೆಯೇ ಹೆಚ್ಚು ಪ್ರೇಮ ಇರಿಸಿಕೊಂಡು ಯಾವುದೇ ಐಷಾರಾಮತೆಗೆ

ಒಳಗಾಗದೆ ಜೀವನ ಸಾಗಿಸುತ್ತಿದ್ದರೂ ಸಹ ಅಲ್ಲಿಯೂ ಅವಳ ಮೇಲೆ ಶೋಷಣೆಯ ನೆರಳು ಹಾದು ಹೋಗುತ್ತದೆ. ಮಕ್ಕಳು ಮರಿಯಿಲ್ಲದ ಕರಗವ್ವ ಊರ ಮಕ್ಕಳಿಗೆ ನೀತಿ ಕತೆಗಳನ್ನು ರೋಚಕವಾಗಿ ಹೇಳುವುದರ ಮುಖೇನ ಮಕ್ಕಳನ್ನು ತಿದ್ದುವ ಕೆಲಸ ಮಾಡುತ್ತಿದ್ದಳು. ಮಕ್ಕಳೆಲ್ಲ ಕೆಲಸ, ಕಾರ್ಯ, ಶಾಲೆ ಎಲ್ಲವನ್ನೂ ಬಿಟ್ಟು ಇವಳ ಕಥೆಯನ್ನೇ ಕೇಳುತ್ತಿರುತ್ತವೆ. ಅಂತಹ ಸಮಯಕ್ಕೆ "ಹಿಂಗೆ ಗುಡ್ಡೆ ಹಾಕೊಂಡು ಊರ ಹೈಕುಳ್ನೆಲ್ಲ ಹಾಳ್ಮಾಡ್‌ಬುಟ್ಟೆ. ಆ ನಲ್ಲೂರಯ್ಯ ನಿನ್ನ ಹಾರಿಸ್ಕೊಂಡು ಬಂದಾಗ್ಲೇ ಈ ಊರಿನ ಗಿರೇಸ್ಥರು ಒದ್ದು ನಿನ್ನ ಆಚೆ ಅಟ್‌ಬೇಕಿತ್ತು".[೩] ಎನ್ನುತ್ತಾ ಅವಳನ್ನು ನಿಂದಿಸುವ ಕೆಲಸ ಮಾಡುತ್ತಾನರೆ. ಪಿಂಚಣಿ ಕೊಡಿಸ್ತೀನಿ ಎಂಬ ನೆಪವನ್ನೊಡ್ಡಿ ಪಂಚಾಯ್ತಿ ಸೆಕ್ರೆಟರಿ ಮತ್ತು ಪುಡಾರಿ ಕೆಂಚಪ್ಪ ಕರಗವ್ವನಿಂದ ಸಾಕಷ್ಟು ಹಣ ಕಸಿದುಕೊಂಡು ಮತ್ತು ಇದ್ದ ಬದ್ದ ಮನೆಯನ್ನೂ ಹಾಳು ಮಾಡುವ ಹಂತದಲ್ಲಿದ್ದರು. ಅದನ್ನು ತಿಳಿದ ಕರಗವ್ವ ಸಿಡಿಯುತ್ತಾಳೆ. ಅವರು ಮತ್ತೆ ಅವಳ ಮನೆ ಬಾಗಿಲಿಗೆ ಬಂದಾಗ ಪೊರಕೆ ತೋರಿಸಿ 'ಯಾವ ಪಿಂಚಣಿಯೂ ಬೇಡ' ಎನ್ನುತ್ತಾಳೆ. ಸೆಕ್ರೆಟರಿ, ಕೆಂಚಪ್ಪನನ್ನೂ, ಪಿಂಚಣಿಯನ್ನೂ ಧಿಕ್ಕರಿಸುವುದರ ಮೂಲಕ ಬಂಡಾಯವೆದ್ದು ಪ್ರತಿಭಟನೆಯನ್ನು ಸೂಚಿಸುತ್ತಾಳೆ.

'ತೆರೆ ತೆರೆ ಸರಿದಂತೆ'ಯ ಮಾದಿಯ ಹಾಗೆ ತನಗೇ ಶಿಕ್ಷೆ ಕೊಟ್ಟುಕೊಳ್ಳದೆ, ತನ್ನನ್ನು ಬೈಯುವವರನ್ನು, ತನ್ನ ಬಗ್ಗೆ ಹಂಗಿಸುವವರನ್ನು ತಿದ್ದುವ ಕೆಲಸವನ್ನು ಮಾಡುತ್ತಿದ್ದಳು ಕರಗವ್ವ ಊರಿನ ಜನರ ಯಾವ ಮಾತಿಗೂ ಮನಸ್ಸು ಕೆಡಿಸಿಕೊಳ್ಳದೆ ನಯವಾಗಿಯೇ ತನ್ನ ತನ್ನವನ್ನು ಪರಿಚಯಿಸಿಕೊಳ್ಳುತ್ತಿದ್ದಳು. ಕರಗವ್ವನ ಚಾರಿತ್ರ್ಯವನ್ನೇ ನಿರಾಕರಿಸುವ ನಂಜಿ ತನ್ನ ಮಗನಿಂದಲೇ ಪರಿವರ್ತನೆಗೊಳ್ಳುವ ಬಗ್ಗೆ ಹೆಣ್ಣಿನ ಇರುವಿಕೆಯ ಪ್ರಶ್ನೆಯನ್ನು ಶಕ್ತವಾಗಿ ಎದುರಿಸಿದ ನಿದರ್ಶನವಾಗಿ ಕಂಡುಬರುತ್ತದೆ.

ಪಂಚಾಯ್ತಿ ಸೆಕರೇಟ್ರಿ ಮತ್ತು ಊರಿನ ಪೂಜಾರಿ ಕೆಂಚಪ್ಪನಿಂದ ವಂಚನೆಗೆ ಒಳಗಾಗಿ ಇದ್ದ ಬದ್ದ ಪುಡಿಗಾಸನ್ನು ವಯಸ್ಸಾದ ಕೊನೆಗಾಲದಲ್ಲಿ ಕಳೆದುಕೊಳ್ಳುವ 'ಕರಗವ್ವ'ನ ಪಾತ್ರವು ಸಮಾಜ ಒಂದು ಅಸಹಾಯಕ ಹೆಣ್ಣನ್ನು ಸ್ವಾರ್ಥಕ್ಕಾಗಿ ಬಳಸಿಕೊಂಡು ಬದುಕಿನುದ್ದಕ್ಕೂ ಸಂಘರ್ಷವನ್ನಷ್ಟನ್ನೇ ಮುಂದು ಮಾಡುವ ಸ್ಥಿತಿಯನ್ನು ಧ್ವನಿಸುತ್ತದೆ.

ಸತ್ಯವತಿಯಾಗಲೀ, ಕರಗವ್ವ, ಮಾದಿ ಮುಂತಾದಂತಹ ಬಡತನದ ಪಾತ್ರಗಳು ಹೊರಗೆ ಎಷ್ಟೇ ಕ್ರಿಯಾಶೀಲರಾಗಿದ್ದರೂ, ಅವರವರ ಚರಿತ್ರೆಯ ದಬ್ಬಾಳಿಕೆ ಮತ್ತು ಶೋಷಣೆಯ ಅಸಹಾಯಕತೆ ಮತ್ತು ಅಬಲತ್ವದ ಕಾರಣಗಳಿಂದಾಗಿ 'ಬದುಕಿನ ಅನುಭವಗಳ

ರೂಪಕ'ಗಳಾಗಿಬಿಡುತ್ತವೆ. ವ್ಯಕ್ತಿಗಳು ಮತ್ತು ಅವರ ಬದುಕು ಇಲ್ಲಿನ ಪ್ರಥಮ ಆಸಕ್ತಿಯಾಗಿ ಬಹುತೇಕ ಕಥೆಗಳು ಸಮಾಜಶಾಸ್ತ್ರೀಯ ಒಳನೋಟಗಳನ್ನು ಬಿಚ್ಚಿಡುತ್ತವೆ.

ಪರಸ್ಪರ ವಿರುದ್ಧವಾದ ವ್ಯಕ್ತಿ–ಸಮಾಜ, ಗಂಡು–ಹೆಣ್ಣು, ಪ್ರಕೃತಿ–ಪುರುಷ, ಸಂಸ್ಕೃತಿ–ಆಧುನಿಕತೆಯನ್ನು ಒಂದರ ಎದುರು ಮತ್ತೊಂದನ್ನು ಅಥವಾ ಒಂದರ ಎದುರು ಹಲವನ್ನೂ ನಿಲ್ಲಿಸಿ ನೋಡಿದಾಗ ಇಲ್ಲಿನ ಕಥೆಗಳಲ್ಲಿನ ದ್ವಂದ್ವಾತ್ಮಕ ನಿಲುವು ವ್ಯಕ್ತವಾಗುತ್ತದೆ. ಶೋಷಣೆಯ ಮೂಲ ತಿಳಿಯುತ್ತದೆ. ಹಳ್ಳಿಯ ಬಡತನದ ಭಾರದೊಳಗೆ ಹೆಣ್ಣಿನ ಅಸ್ತಿತ್ವದ ನೆಲೆ ಹಾಗೂ ಪುರುಷ ನಿಷ್ಠೆ, ಸಮಾಜದ ರಾಜಕೀಯ ಇವುಗಳ ಪರಿಣಾಮಗಳ ಬಗ್ಗೆ ಚಿಕ್ಕಣ್ಣನವರ ಎಲ್ಲ ಕಥಾಸಂವಿಧಾನದೊಳಗೂ ಒಂದು 'ಎಚ್ಚರದ ಎಳೆ' ಕಂಡುಬರುತ್ತದೆ. ಈ ಎಚ್ಚರದ ಎಳೆಯೇ ಕಥೆಯೊಳಗಿನ ಕಥೆಯನ್ನು ಪ್ರತಿಧ್ವನಿಸುತ್ತದೆ.

ಜೀವಕ್ಕೆ ದೂರವಾದ ಸಿದ್ಧಾಂತಗಳಿಗೆ ಆತುಕೊಂಡು ಸ್ವಕಲ್ಪಿತ ಪಾತ್ರಗಳ ಮುಖಾಂತರ ಪ್ರತಿಭಟನೆಯನ್ನು ಗುರ್ತಿಸದೆ ತಮ್ಮ ತಮ್ಮ ಪ್ರಜ್ಞೆಯ ಆವರಣದೊಳಗೇ ಬಹಿರಂಗವಾಗಲ್ಲದಿದ್ದರೂ ಸ್ಪಷ್ಟವಾಗಿ ಅಧಿಕಾರವನ್ನು, ವರ್ಗತಾರತಮ್ಯವನ್ನು ವಿರೋಧಿಸುವುದನ್ನು 'ಓಡುವ ಗಿಡಮರಗಳೊಂದಿಗೆ' ಕಥೆಯ ನಾಯಕಿ ತನ್ನ ಅಸಹಾಯಕತೆಯಲ್ಲಿಯೂ ಸ್ವಾಭಿಮಾನವನ್ನು ಮೆರೆಯುತ್ತಾಳೆ. ಇಲ್ಲಿ ಈಕೆ ದನಿ ಕಳೆದುಕೊಂಡಿರುವವರ ಪ್ರತಿನಿಧಿಯಾಗಿ ಕಂಡುಬರುತ್ತಾಳೆ. ಶ್ರೀಮಂತ ವರ್ಗದ ದರ್ಪ, ದಬ್ಬಾಳಿಕೆ, ಅಹಂಕಾರಗಳು ಅಷ್ಟೇನೂ ಬಹಿರಂಗವಾಗಲ್ಲದಿದ್ದರೂ ರೈಲಿನ ಕಿಟಕಿಯನ್ನು ಧಡಕ್ಕನೆ ಜೋರಾಗಿ ಎಳೆದು ಮುಚ್ಚುವುದು, ಮಕ್ಕಳಿಗೆ ಜೋರಾಗಿ ಕಿಟಕಿಯ ಹತ್ತಿರ ನಿಲ್ಲದಂತೆ ಹೇಳುವುದರ ಮುಖಾಂತರ ವಿರೋಧವನ್ನು ವ್ಯಕ್ತಪಡಿಸುವುದನ್ನು ಕಾಣಬಹುದು.

ಇಲ್ಲಿನ ನಾಯಕಿ ಇಪ್ಪತರ ಗಡಿ ದಾಟುವ ಮೊದಲೇ ಮೂರು ಮಕ್ಕಳ ತಾಯಿಯಾಗಿದ್ದಳು. ಎಂಭತ್ತು ವರ್ಷ ವಯಸ್ಸಾಗಿರುವಂತೆ ಅವಳ ದೇಹ ಜರ್ಜಿತವಾಗಿತ್ತು. ಮೂಳೆ ಚಕ್ಕಳಗಳು ಎದ್ದುಕಾಣುತ್ತಿದ್ದವು. ಕನಸನ್ನು ತುಂಬಿಕೊಂಡು, ಕನವರಿಕೆಗಳಿಂದ, ಸಂತೋಷ, ಉನ್ಮಾದಗಳಿಂದ ಕುಣಿದು ಕುಪ್ಪಳಿಸಬೇಕಿದ್ದವಳು, ಈಗ ತತ್ತರಿಸಿ ಹೋಗಿದ್ದಾಳೆ. ಇದಕ್ಕೂ ಮೀರಿದ ಮತ್ತೊಂದು ಸ್ಥಿತಿ ಅವಳ ಗಂಡ ಈಗಾಗಲೇ ಸತ್ತು, ಗಂಡನ ಮನೆಯಿಂದ ಹೊರಬಂದಿರುವುದು. ಈ ಎಲ್ಲಾ ಅಸಹಾಯಕ ಸ್ಥಿತಿ ಅವಳನ್ನು ನೋಡಿದ ತಕ್ಷಣವೇ ತಿಳಿಯುವಂತಿದ್ದರೂ, ಇವಳಿಗಿಂತ ಸ್ವಲ್ಪ ಮೇಲ್ವರ್ಗದವರ ದರ್ಪ, ಜೋರತ್ತು ಅವಳನ್ನು ಮತ್ತಷ್ಟು ಚಿಂತೆಗೀಡುಮಾಡುತ್ತದೆ.

ರೈಲು ಅನೇಕ ಹಳ್ಳ-ದಿಣ್ಣೆಗಳನ್ನು ಏರುತ್ತಾ ಇಳಿಯುತ್ತಾ, ದಟ್ಟ ಕಾಡುಗಳ ಮಧ್ಯೆ, ಬಟಾನ್ ಬಯಲುಗಳಲ್ಲಿ ಸಾಗುತ್ತಾ, ಬಯಲು, ಮರ-ಗಿಡ, ಹಕ್ಕಿ-ಪಕ್ಷಿ, ಕೆರೆ-ಕುಂಟೆ ಎಲ್ಲವನ್ನೂ ಹಿಂದೆ ಹಾಕುತ್ತಾ ಸಾಗುತ್ತಿದೆ. ಹಾಗೆಯೇ ಬದುಕು ಅನೇಕ ಕಷ್ಟ ಕಾರ್ಪಣ್ಯಗಳನ್ನು ಸಹಿಸಿಯೂ ಸಾಗುವ ಅನಿವಾರ್ಯತೆಯನ್ನು ಅದೇ ಬದುಕೆಂದು ತಿಳಿಸುವಿಕೆಯನ್ನೂ ಸೂಚಿಸುತ್ತದೆ.

ಯಜಮಾನಿ ತಮ್ಮ ಮಗುವಿಗೆ ಹೆಚ್ಚು ಗಾಳಿ ಬೀಸುತ್ತಿದೆ ಎಂಬ ಕಾರಣದಿಂದ ಕಿಟಕಿಯ ಬಳಿಯೇ ಕೂತಿದ್ದ ಕಥೆಯ ನಾಯಕಿಯನ್ನು ಕುರಿತು ಹೇಳಿದಾಗಲೂ, ಆಕೆ ಅವಳದೇ ಚಿಂತೆಯಲ್ಲಿ ಮುಳುಗಿರುವಾಗ ಅದನ್ನು ಕೇಳಿಸಿಕೊಳ್ಳದೇ ಇರುವ ಸಂದರ್ಭದಲ್ಲಿ "ಅದೇನು ಒಂದ್ಸಲ ಹೇಳಿದ್ದು ಕೇಳಿಸಲ್ವಾ? ಆ ಏನಮ್ಮಾ?"[೪] ಎಂದು ಗದುರುತ್ತಾಳೆ. ಆಗ ಕಥೆಯ ನಾಯಕಿ "ಏನ್ ಇವ್‌ರೆಲ್ಲ ಬಾಳೆಹಣ್ಣಿನ ಗುಡಾಣ್‌ದಲ್ಲಿ ಬೆಳ್‌ದಿರ್‌ಬೇಕು"[೫] ಅಂಥ ಗೊಣಗಿಕೊಳ್ಳುವುದು. ಮತ್ತೆ ಕಿಟಕಿಯನ್ನು ಮುಚ್ಚದೇ ಇರುವುದನ್ನು ಗಮನಿಸಿದ ಯಜಮಾನ "ಈ ಫ್ಯಾನ್ ಗಾಳಿನೇ ಸಾಕಂತೆ ಹಾಕಮ್ಮ ಏನ್ ನಿಂಗೆ ಹೇಳ್ತಾನೇ ಇರಬೇಕಲ್ಲ"[೬] ಅಂತ ರೋಪು ಮಾಡುತ್ತಾನೆ.

ಈ ದರ್ಪಕ್ಕೆ ಪ್ರತಿಯಾಗಿ ಮಾತಿನಿಂದ ಉತ್ತರಿಸದಿದ್ದರೂ ಸಹ ರೈಲಿನ ಕಿಟಕಿಯನ್ನು ರಭಸವಾಗಿ ಮುಚ್ಚುವುದರ ಮೂಲಕ ಪ್ರತಿಭಟಿಸುವಿಕೆಯನ್ನು ಕಾಣಬಹುದು. ಅಸಹಾಯಕತೆ, ನೋವಿನಿಂದ ಬಳಲುತ್ತಿರುವ ಹೆಣ್ಣುಮಗಳಿಗೆ ಸಾಮಾನ್ಯ ಅನುಕಂಪವನ್ನು ತೋರದ ಅಮಾನವೀಯ ನೆಲೆಯನ್ನು ಈ ಕಥೆಯಲ್ಲಿ ಕಾಣಬಹುದು.

ಹೆಣ್ಣು ಎಷ್ಟೇ ಶ್ರೀಮಂತಳಾದರೂ ಸಹ ಅವಳ ದಮನಕ್ಕೇನೂ ಕಡಿಮೆಯಿಲ್ಲ. ಹೆಣ್ಣು ಬಡವಳಾದರಂತೂ ಅವಳ ಸ್ಥಿತಿ ಇನ್ನೂ ಶೋಚನೀಯ. 'ಹಸಿರು ಹರಳಿನುಂಗುರ' ಕಥೆಯ ಲಕ್ಷ್ಮಿ ಚಿಕ್ಕ ವಯಸ್ಸಿನಿಂದಲೂ ಬಹಳ ನಾಜೂಕಾಗಿ ಬೆಳೆದವಳು ಮಾನವೀಯ ಮೌಲ್ಯಗಳನ್ನು ಮೈಗೂಡಿಕೊಂಡವಳು ಅತ್ಯಂತ ಬುದ್ಧಿವಂತೆ, ರೂಪವಂತೆ. ಅಂಥಹವಳನ್ನೂ ಸಹ ನಿರ್ಲಕ್ಷಿಸುವ ಪುರುಷ ವ್ಯವಸ್ಥೆಯನ್ನು ಕಥೆಯಲ್ಲಿ ಕಾಣಬಹುದು. ಐಷಾರಾಮಿ ಜೀವನ ನಡೆಸುತ್ತಿದ್ದಾಗಲೂ ಅಸ್ತಿತ್ವದ ಕೊರತೆ, ಅಸ್ಮಿತೆಯ ಕೊರತೆ ಎದ್ದುಕಾಣುವುದನ್ನು ಅವಳ ಮಾತುಗಳಲ್ಲೇ ಈ ಕಥೆಯಲ್ಲಿ ಕಾಣಬಹುದು.

> "ನನ್ನಪ್ಪ ನನ್ನ ಮಾರ್‌ಕೊಂಡು ಬಿಟ್ಟ ಮೂರ್ತಿ, ಹೊಂದಾಣಿಕೆ ಅನ್ನೋದು ಆಗಲೇ ಇಲ್ಲ. ನಾನು ಸೋತೆನೋ, ಗೆದ್ದೆನೋ ಹೆಂಗೆ ಹೇಳ್ಲಿ? ಆದರೆ ಗಂಡ, ಮಕ್ಕಳು, ಆಸ್ತಿ ಯಾವುದೂ ಕೂಡ ನನ್ನದಲ್ಲ".[೭]

"ನನ್ನ ಗಂಡ, ಅನ್ನ ಹಾಕುವಂತೆಯೇ ಮೈ ತುಂಬ ಚಿನ್ನ ತಂದು ಸುರಿಯುತ್ತಾನೆ. ದಾಯಾದಿಗಳಿಗೆ ಹಂಚಿಹೋಗಿ ಬಿಡಬಹುದಾದ ಆಸ್ತಿಯ ಉತ್ತರಾಧಿಕಾರಿಯಾಗಿ ಮಕ್ಕಳು ಬೆಳೆಯುತ್ತಿದ್ದಾರೆ. ಆ ಮನೆ, ಹೋಗಿ-ಬರುವವರ ಛತ್ರವಾಗಿದೆ. ಅಲ್ಲೆಲ್ಲೂ ಪ್ರೀತಿಯೆಂಬುದು ಇಲ್ಲ; ಸ್ನೇಹ ಕಾಣೋದಿಲ್ಲ. ಮನುಷ್ಯ ಸಂಬಂಧಗಳ ಒತ್ತಡವೇ ಇಲ್ಲ. ನೀವು ನಂಬ್‌ತೀರಾ-ಆ ಮೂರು ಮಕ್ಕಳು ನನ್ನವೇ ಎಂದು ಬಾಯ್ತುಂಬ ಹೇಳ್‌ಕೊಂಡು ಅನುಭವಿಸೋ ಹಿತ ಅನುಭವಿಸಲಿಲ್ಲ. ಆ ಕರುಳಿಗೆ ಮಾತೃವಾತ್ಸಲ್ಯದ ಸ್ಪಂಧನವೇ ದಕ್ಕಲಿಲ್ಲ....."[೮]

ದೇವರು-ದೇವಾಲಯ, ಪೂಜೆ-ಪುರಸ್ಕಾರಗಳು, ಪೂಜಾರಿ-ನಂಬಿಕೆ, ಹಬ್ಬ-ಆಚರಣೆಗಳು ಜೀವ ಪೋಷಕವಾಗುವುದರ ಬದಲು ಜೀವ ವಿನಾಶಕವಾಗುವುದನ್ನು; ಮಾನನಾಶಕವಾಗುವುದನ್ನು 'ಒಡಲುರಿ' ಮತ್ತು 'ವಂಶಸ್ಥರು' ಕಥೆ ಸಾರುತ್ತದೆ. ಶೋಷಣೆ ಮತ್ತು ಮೌಢ್ಯತೆಯ ನೆಲೆ ಕ್ರೌರ್ಯ ರೂಪವನ್ನು ತಾಳುವುದನ್ನು ಈ ಕಥೆ ಧ್ವನಿಸುತ್ತದೆ.

'ಒಡಲುರಿ'ಯ ಮುಖ್ಯ ಪಾತ್ರ ಸಣ್ಣಿಂಗಿ. ಈಕೆ ಸ್ವಲ್ಪ ಘಾಟಿ ಹೆಂಗಸು. ಈಕೆಯ ಗಂಡ, ಸಾಧು ಸ್ವಭಾವದವನು. ಇವನು ಒಮ್ಮೆ ಓರಿ ಮಾರಲೆಂದು ಸಂತೆಗೆ ಹೋದವನು ಮರಳಿ ಬರಲೇ ಇಲ್ಲ. ಅವನಿಗಾಗಿ ಕಾಯುತ್ತಾ ಕೂಲಿ ಕೆಲಸ ಮಾಡಿ ಬದುಕು ಸಾಗಿಸುತ್ತಿದ್ದ ಸಣ್ಣಿಂಗಿ ಹಳ್ಳಿಯ ಪೂಜಾರಪ್ಪ ಹೇಳಿದಂತೆ ಊರ ಹೊರಗಡೆ ತನ್ನ ಗಂಡನು ಮರಳಿ ಬರುವುದಕ್ಕಾಗಿ ವಿಶೇಷ ಪೂಜೆ ಮಾಡಿಸಲು ಸಿದ್ಧಳಾಗುತ್ತಾಳೆ. ಆದರೆ, ಪೂಜೆಯ ನೆಪದಲ್ಲಿ ಅವಳನ್ನೇ ಆಕ್ರಮಿಸಲು ಬಂದ ಪೂಜಾರಪ್ಪನನ್ನು ದೂರ ತಳ್ಳಿ ಭ್ರಮನಿರಸನವಾಗಿ ಸಣ್ಣಿಂಗಿ ಮನೆಗೆ ಹಿಂತಿರುಗುತ್ತಾಳೆ. ಮುಂದೊಂದು ದಿನ ಜಾತ್ರೆಯ ಸಂದರ್ಭದಲ್ಲಿ ದೇವರು ಮೈಮೇಲೆ ಬಂದ ಪೂಜಾರಪ್ಪ ಊರಿನ ಕಷ್ಟಗಳಿಗೆಲ್ಲಾ ಸಣ್ಣಿಂಗಿಯೇ ಕಾರಣ ಎಂದು ತನ್ನ ಕೋಪವನ್ನು ತೀರಿಸಿಕೊಳ್ಳುತ್ತಾನೆ. ಆ ಕ್ಷಣದಿಂದ ಸಣ್ಣಿಂಗಿಗೆ ದೇವರು, ಪೂಜಾರಿ, ಆಚರಣೆಗಳು ಇವೆಲ್ಲವುಗಳ ಪೊಳ್ಳುತನ ಅರಿವಾಗುತ್ತದೆ.

"ಕಂಡಿದ್ದೀನಿ ಕಂತೆ ಮುಚ್ಚೋ ನಿನ್ನ ಸರಾನ.... ದೇವ್ರು ಬತ್ತಾನೆ ದೇವ್ರು ಬತ್ತಾನೆ ಅಂತ ನಂಬ್ಸಿ ನಡು ಹೊಳೀಲಿ ಕತ್ತು ಕುಯ್ಯಾಕೆ ನೋಡ್ತಿರೇನ್ರೋ ಮನೆಹಾಳು ನನ್ಮಕ್ಕಾ"[೯]

ಎಂದು ಅಬ್ಬರಿಸಿ ಇಡೀ ವ್ಯವಸ್ಥೆಯ ವಿರುದ್ಧ ತಿರುಗಿ ಬೀಳುತ್ತಾಳೆ.

ಈ ಕಥೆಯಲ್ಲಿ ವ್ಯಕ್ತಿಯೊಬ್ಬನ ಗೋಸುಂಬೆತನವನ್ನು, ಪ್ರಜ್ಞಾಸ್ತರದಲ್ಲಿ ಆ ವ್ಯಕ್ತಿಯೂ ಗುರುತಿಸಿಕೊಂಡು ಇದ್ದಿರಲಾರದ ಅನುಭವದ ಬಿರುಕನ್ನು, ಅಲ್ಪತನವನ್ನೂ ಒಂದೊಂದೇ ಪದರ ಪದರವಾಗಿ ಬಿಚ್ಚುತ್ತಾ ಒಳಗಿನ ಸತ್ಯವನ್ನು ಅದರ ನಗ್ನತೆಯನ್ನು ಗೋಚರಿಸುತ್ತದೆ.

ಕೆಳವರ್ಗದ ಸ್ತ್ರೀಯೊಬ್ಬಳ ಮೇಲೆ ಮೇಲ್ವರ್ಗದವರು ನಡೆದುಕೊಳ್ಳುವ ರೀತಿ ಮತ್ತು ನಡೆಸುವ ಪಿತೂರಿ ಶೋಷಣೆಯ ಅನೇಕ ಮಜಲುಗಳನ್ನು ಕಾಣಿಸುತ್ತವೆ. ನೇರ ಯುದ್ಧ ಸಾಧ್ಯವಿಲ್ಲದಿದ್ದಾಗ, ಗುಪ್ತವಾಗಿ, ಸಂಚು ಹೂಡಿ ತನ್ನ ನ್ಯೂನ್ಯತೆಯನ್ನು ಮುಚ್ಚಿಕೊಳ್ಳುವ ಸಲುವಾಗಿ ದೇವರ ಮುಖವಾಡ ಹಾಕಿಕೊಂಡು ಹೆಣ್ಣೊಬ್ಬಳ ಬದುಕನ್ನೇ ನಾಶ ಮಾಡುವ ಹಂತಕ್ಕೆ ತಲುಪುತ್ತಾನೆ ಪೂಜಾರಿ. ಅದನ್ನೇ ಊರ ಜನರೂ ನಂಬುವುದು ಮೌಢ್ಯಕ್ಕೆ ಹಿಡಿದ ಕನ್ನಡಿ.

ಹಳೆಯ ಆಚಾರಗಳು ಅವುಗಳಿಂದ ಹುಟ್ಟಿ ನಮ್ಮ ಮನಸ್ಸಿನಾಳದಲ್ಲಿ ಬೇರು ಬಿಟ್ಟಿರುವ ಭಾವನೆಗಳು ಮತ್ತು ಹೊಸ ಅರಿವಿನ ಮಧ್ಯೆ ಸಿಕ್ಕಿಕೊಂಡು ಪಾಡು ಪಡುವ ಸಣ್ಣಿಂಗಿ ಬಲಿಪಶುವಾಗಿ ತೋರುತ್ತಾಳೆ. ಆದರೂ ಕೊನೆಯಲ್ಲಿ ಎಲ್ಲವನ್ನು ಧಿಕ್ಕರಿಸಿ “ನಾಗ ಎಲ್ಲಿದ್ದಿ ಬಾರೋ ನನ್ ಕಂದ ತುಳ್ದು ಗಿಲ್ದು ಹಾಕ್ಯಾರು ಈ ರಾಕ್ಸಸ್ರು”[೧೦] ಇಲ್ಲಿ ರಾಕ್ಸಸ್ರು ಎಂದರೆ ಪೂಜಾರಿ ಮತ್ತು ಪೂಜಾರಿ ಮಾತು ನಂಬಿ ನಡೆಯುವಂತ ಜನರನ್ನು ಕುರಿತಂತೆ ಹೇಳುವುದು.

ಗಂಡನ ಮನೆಯ ಬಿದ್ದುಹೋದ ವಹಿವಾಟನ್ನು ಎತ್ತುವ ಎದೆಗಾರಿಕೆಯನ್ನು ಮೆರೆದರೂ, ದಾಯದಿಗಳ ಮಾತ್ಸರ್ಯವನ್ನು ಮೆಟ್ಟಿ ತಲೆ ಎತ್ತಿ ನಡೆದರೂ, ಸಮಾಜದ ಸವಾಲುಗಳನ್ನು ಎದುರಿಸಿದರೂ–ಗಂಡನ ಆದರ್ಶದ ವೈಭವದ ಹುಸಿಮೌಲ್ಯಗಳ ಹೆಜ್ಜೆಯಲ್ಲಿಯೇ ಹೆಂಡತಿಯ ಹೆಜ್ಜೆಗಳನ್ನು ಗುರುತಿಸಿ, ಅವಳ ಒಳಗುದಿ, ನೋವು ಸಂಕಟಗಳಿಗೆ ಕಿವಿಗೊಡದೆ, ತ್ಯಾಗಿಯೆಂದು ಸಮಾಜ ಕೊಂಡಾಡುವುದು. ಅವಳ ಗಂಡುತನದ ಎದೆಗಾರಿಕೆಯನ್ನು ಹೆಣ್ಣುತನದಿಂದಲೇ ಗುರುತಿಸಿ ಬಲಿದಾನ, ಆದರ್ಶ, ಪಾತಿವ್ರತ್ಯ ಎಂದೆಲ್ಲಾ ವೈಭವೀಕರಿಸಿ ಸಂಪ್ರದಾಯದ ಅಸಹಜ ಹುಸಿ ಮೌಲ್ಯಗಳಿಂದ ಹೆಣ್ಣನ್ನು ಸೆರೆಯಾಗಿಸುವುದು. ಗಂಡು ಹೆಣ್ಣಿನ ಎದೆಯೊಳಗಿನ ನೋವನ್ನು ಗುರುತಿಸುವುದಿಲ್ಲ. ಸುಳ್ಳು ಸಂಪ್ರದಾಯದ ಮೌಲ್ಯಗಳೇ ಹೆಣ್ಣಿಗೆ ಹಿಂಸಾ ಮಾರ್ಗಗಳು. ಹೆಣ್ಣಿನ ಒಂಟಿತನದ ನೋವುಗಳು ಸಮಾಜ ಗುರುತಿಸುವುದೇ ಇಲ್ಲ. ಹೆಣ್ಣಿನ ಶೋಷಣೆಗಿಂತ ಭೀಕರವಾಗಿದ್ದು ಹೆಣ್ಣಿನ ಒಂಟಿತನ. ಅದು ಆರ್ಥಿಕ ಮತ್ತು ಸಮಾಜ ಹೋರಾಟಕ್ಕಿಂತ ತೀವ್ರವಾದದ್ದು. ಕುಟುಂಬಕ್ಕಾಗಿ ವ್ಯಕ್ತಿ, ಗ್ರಾಮಕ್ಕಾಗಿ ಕುಟುಂಬ, ದೇಶಕ್ಕಾಗಿ ಗ್ರಾಮ ಬಲಿಯಾಗುವ ಆದರ್ಶಕ್ಕೆ ವಿರುದ್ಧವಾದ ತತ್ವ ಹೆಣ್ಣಿನ ಪ್ರತಿಪಾದನೆಯಾಗಿದೆ. ಹುಸಿ ಮೌಲ್ಯಗಳನ್ನು ಪ್ರತಿಭಟಿಸುವ ತೀವ್ರ ಪ್ರತಿಕ್ರಿಯೆಯ ಮತ್ತೊಂದು ಮುಖದ ವಾಸ್ತವತೆಯನ್ನು ‘ಒಡಲುರಿ’ ಕಥೆ ಚಿತ್ರಿಸುತ್ತದೆ.

ಭಾರತದಂತಹ ಜಾತಿ ವ್ಯವಸ್ಥೆ ಇರುವ ಸಾಮಾಜಿಕ ವ್ಯವಸ್ಥೆಯಲ್ಲಿ ಮನುಷ್ಯ ಸಂಬಂಧಗಳು ಜಾತಿಯಷ್ಟೇ ಸಂಕೀರ್ಣ ಸ್ವರೂಪವನ್ನು ಪಡೆದುಕೊಂಡುಬಿಟ್ಟಿವೆ. ವರ್ಣ ವ್ಯವಸ್ಥೆಯಿರುವ ದೇಶಗಳಲ್ಲಿ ಅಥವಾ ಕಪ್ಪು ಬಿಳಿ ಎಂದು ಜನರನ್ನು ವರ್ಗೀಕರಿಸಿಕೊಂಡಾಗ ಉಂಟಾಗುವ ಮನುಷ್ಯ ಸಂಬಂಧಗಳಿಗೂ ಸಾವಿರಾರು ಜಾತಿಗಳು ಉಪಜಾತಿಗಳು ಇರುವ ಭಾರತದಂತಹ ಸಾಮಾಜಿಕ ವ್ಯವಸ್ಥೆಯಲ್ಲಿನ ಮನುಷ್ಯ ಸಂಬಂಧಗಳ ಸ್ವರೂಪಕ್ಕೂ ವ್ಯತ್ಯಾಸವಿದ್ದು ಇಲ್ಲಿ ಬಹಳಷ್ಟು ಸಂಕೀರ್ಣತೆ ಕಂಡುಬರುತ್ತದೆ. ಇಂತಹ ಸಂಕೀರ್ಣತೆಯನ್ನು ಹಿಡಿದಿಡುವ, ಆ ಮೂಲಕ ಅದನ್ನು ವಿವರವಾಗಿ ಅನಾವರಣಗೊಳಿಸುವ ಕಲೆಗಾರಿಕೆ ಚಿಕ್ಕಣ್ಣನವರ ಕಥನಕ್ಕಿದೆ ಎನ್ನಬಹುದು.

ಇಲ್ಲಿನ ಜಾತಿ ಎಂಬ ಭಾವನೆ ಧಾರ್ಮಿಕ ನೆಲೆಯನ್ನು ಹೊಕ್ಕು ಜಗತ್ತಿನ ಜೀವ ಮತ್ತು ನಿರ್ಜೀವ ವಿಭಾಗಗಳೆರಡರಲ್ಲೂ ಬೇರು ಬಿಟ್ಟು ಹರಡಿವೆ. ದವಸ-ಧಾನ್ಯ, ಚಿನ್ನ-ಬೆಳ್ಳಿ-ವಜ್ರ, ಸಂಗೀತ-ಕಲೆ, ಪ್ರಾಣಿ-ಪಕ್ಷಿಗಳಲ್ಲಿಯೂ ಕೂಡ ಜಾತಿ ಬೇಧವನ್ನು ಹುಡುಕಲಾಗಿದೆ. ಈ ಮೂಲಕ ಜಾತಿ ಪದ್ಧತಿಯು ಜೀವನದ ಸಹಜ ನಿಯಮವೆಂಬ ಭಾವನೆಯನ್ನು ಜನಮನದಲ್ಲಿ ಬಿತ್ತಲಾಗಿದೆ. ಹೀಗಾಗಿ ಜಾತಿ ವ್ಯವಸ್ಥೆಯು ಆಹಾರ ಸೇವನೆ, ಉಡುಗೆ-ತೊಡುಗೆ, ವ್ಯವಹಾರಗಳು, ವಿವಾಹ ಸಂಬಂಧಗಳು, ದೈವಾರಾಧನೆಯಂತಹ ಸಾಮಾಜಿಕ ಚಟುವಟಿಕೆಗಳನ್ನು ಒಳಗೊಂಡಿರುವ ಒಂದು ಜೀವನ ವ್ಯವಸ್ಥೆಯಾಗಿ ಮಾರ್ಪಟ್ಟು ಮತ ಧರ್ಮದ ಚೌಕಟ್ಟಿನೊಳಗೆ ಸೇರಿಕೊಂಡುಬಿಟ್ಟಿವೆ. ಯಾವ ಸಾಮಾಜಿಕ ವ್ಯವಸ್ಥೆ ಮತೀಯ ಸ್ವರೂಪವನ್ನು ಪಡೆದುಕೊಳ್ಳುತ್ತದೋ ಅದು ಚಲನಶೀಲ ಸಾಮಾಜಿಕ ವ್ಯವಸ್ಥೆಯಾಗುವುದಿಲ್ಲ. ಇಂತಹ ವ್ಯವಸ್ಥೆಯಲ್ಲಿ ಜಾತಿ ಪದ್ಧತಿಯನ್ನು ಪಾಲಿಸದಿದ್ದಲ್ಲಿ ಉಗ್ರ ಶಿಕ್ಷೆಯನ್ನು ವಿಧಿಸಲಾಗುತ್ತದೆ. ಇಂತಹ ಸಾಮಾಜಿಕ ವ್ಯವಸ್ಥೆಯ ಚಲನಶೀಲತೆಯನ್ನು ಧ್ವನಿಸುವಂತಹ ಕಥೆಗಳು, ಪಾತ್ರಗಳು, 'ಒಡಲುರಿ'. 'ನಿಚ್ಚಯ', 'ಜಪದಕಟ್ಟೆ'ಯ ಕಥೆಗಳಲ್ಲಿ ಕಂಡುಬರುತ್ತದೆ.

ಶೋಷಣೆಯ ಕ್ರೌರ್ಯಕ್ಕೆ ಮತ್ತೊಂದು ಹೆಸರಿಸಲೇಬೇಕಾದ ಪಾತ್ರ 'ವಂಶಸ್ಥರು' ಕಥೆಯ ಈರವ್ವನ ಪಾತ್ರ. ಪೂಜಾರಪ್ಪ ಈರವ್ವನಿಗೆ ಕೊಟ್ಟ ಸಾಲಕ್ಕೆ ಚಕ್ರಬಡ್ಡಿ ಸೇರಿಸಿ ಈರವ್ವನಿಗಿದ್ದ ಸ್ವಲ್ಪ ಜಮೀನನ್ನು ಕಸಿದುಕೊಳ್ಳುವುದು ಮತ್ತು ಇಡೀ ಊರನ್ನೇ ತನ್ನ ಆಟದ ಮೈದಾನವನ್ನಾಗಿ ಮಾಡಿಕೊಂಡು ಸ್ವೇಚ್ಛೆಯಾಗಿ ಕಾರ್ಯಗಳನ್ನು ಮಾಡುವುದನ್ನು ಕಾಣಬಹುದು.

ಪುರೋಹಿತ ವರ್ಗದ ದೌರ್ಜನ್ಯ ತನಗೆ ಬೇಕಾದ ಹಾಗೆ ಸಮಾಜವನ್ನು ರೂಪಿಸಿಕೊಳ್ಳುವ ಕಲೆಗಾರಿಕೆ, ಎಷ್ಟೇ ತಪ್ಪು ಮಾಡಿದರೂ ಸಿಕ್ಕಿ ಹಾಕಿಕೊಳ್ಳಲಾರದ ಜಾಣ್ಮೆ, ತನ್ನ

ತಪ್ಪನ್ನೂ ಕಂಡವರೂ ಸಹ ದನಿ ಎತ್ತದಂತೆ ಮಾಡುವ ಚಾತುರ್ಯ ಎಂತಹ ವಿದ್ಯಾವಂತರನ್ನೇ ಆಗಲಿ ಬಾಯಿ ಮುಚ್ಚಿಸುವ ಪ್ರತಿನಿಧಿಯಾಗಿ ಶೊಂಭಯ್ಯ ಕಂಡುಬರುತ್ತಾನೆ. ಪುರುಷರನ್ನೇ ಶೋಷಿಸುವ ಶೊಂಭಯ್ಯ ಈರವ್ವನಂತಹ ಬಡ ಹೆಂಗಸನ್ನು ಬೇಕಾದ ಹಾಗೆ ಬಳಸಿಕೊಳ್ಳುತ್ತಾನೆ.

ವಂಶಸ್ಥರು ಕಥೆಯಲ್ಲಿ ಗಮನಿಸುವ ಅಂಶವೆಂದರೆ ಆರ್ಥಿಕವಾಗಿ ಸಾಮಾಜಿಕವಾಗಿ ಕೆಳಗಿನ ಸ್ಥರದಲ್ಲಿದ್ದವರು ಮೇಲ್ವರ್ಗದವರಿಂದ ತಮಗಾಗುತ್ತಿರುವ ಅನ್ಯಾಯಗಳ ಪರಿವೆಯೇ ಇಲ್ಲದೆ ಅದಕ್ಕೆ ಬಲಿಯಾಗುತ್ತಿರುವ, ಅದು ಗೊತ್ತಿದ್ದರೂ ಏನೂ ಮಾಡಲಾರದ ಅಸಹಾಯಕ ಸ್ಥಿತಿಯಲ್ಲಿ ಅದನ್ನೇ ಒಪ್ಪಿಕೊಂಡು ದಿನ ಕಳೆಯುವ, ಹೆಚ್ಚೆಂದರೆ ಕುಡಿದ ಮತ್ತಿನಲ್ಲೋ ತಮಗಾದ ಅನ್ಯಾಯದ ಸಂದರ್ಭದಲ್ಲೋ ಪ್ರತಿಭಟಿಸಿ ತದನಂತರ ಹಿಂದಿನ ಸ್ಥಿತಿಗೆ ಮುಗಿಬೀಳುವ ಗ್ರಾಮಸ್ಥರನ್ನು ಕಾಣಬಹುದು.

ಪೂಜಾರಿ ಶೊಂಭಯ್ಯನನ್ನು ಕುರಿತು, “ಈರವ್ವನ ಮಾತನ್ನು ಇಲ್ಲಿ ಉಲ್ಲೇಖಿಸಬಹುದು.

> “ನನ್ನ ಗಂಡ ಸತ್ತಾಗ ಕಣಪ್ಪ ತಿಥಿಗೆ ಅಂತ ಇಸ್ಕೊಂಡ ಹಣ ಇವತ್ತೀಸಿಕೊಂಡಿದ್ದ ನೂರು ಮಾಡಿ, ನೂರೈವತ್ತಿಗೇರಿಸಿ ಈಗ ಒಂದು ಹೊಲನ ತನ್ನ ಹೆಸರಿಗೆ ಬರೆ, ನಿನಗೆ ಹಣ ತೀರಿಸೋಕ್ಕೆ ಆಗೋದಿಲ್ಲ ಅಂತ ಸಜ ಕೊಡುತ್ತಿದ್ದಾನೆ. ಇರೋ ಒಂದು ಹೊಲಾನು ಬರೆದು ನಾನೇನು ಸಾಯೋಗಂಟಾ ಮಣ್ಣು ಮುಕ್ಕಲ? ಏನ್ ಮಾಡ್ಲಿ ಹಿಂಗೆ ಹೊಟ್ಟೆ ಉರಿಸ್ತಾನಲ್ಲಾ”[೧೧]

ಎಂದು ತಲೆ ಕೆಚ್ಚಿಕೊಂಡಿದ್ದಳು, ಶಾಪ ಹಾಕಿದ್ದಳು, ಆದರೆ ಹೊಲ ಬರೆಯದೆ ಸಾಲ ತೀರಿಸಿ, ಪೂಜಾರಿಗೆ ನೂರೊಂದು ಬೈಗುಳ ಹಾಕುತ್ತಲೇ ಬೇಕಾದಾಗ ಶಾಸ್ತ್ರ ಕೇಲೋದಕ್ಕೆ ಹೋಗಿ ಬರುತ್ತಿದ್ದಳು.

ಜಟ್ಟ ಏದುಸಿರು ಬಿಡುತ್ತಾ

> “ಮುತ್ತುಗದ ಹಳ್ಳದಲ್ಲಿ ನನ್ನ ಮಗಳು ಸೌದೆ ತರೋದಿಕ್ಕೆ ಹೋಗಿದ್ದಳು ಆಕಡೆನೇ ಬಂದ ಶೊಂಭಯ್ಯ ನನ್ನ ಮಗಳ ಹಿಡ್ಕೊಂಡು ದೈನೇ ಅಂದರೆ ಬಿಡದೇ ಹಣ್ಣ್‌ಗಾಯಿ ನೀರ್‌ಗಾಯಿ ಮಾಡಿ ಕಳಿಸವನೇ. ನನ್ನ ಮಗೂನ ನೋಡಕಾಗೋದಿಲ್ಲ”[೧೨]

ಎಂದು ಹುಚ್ಚನಂತೆ ಕೂಗಾಡಿದ್ದ. ಆದರೆ ತನ್ನ ಹಸುವೊಂದಕ್ಕೆ ಹುಷಾರಿಲ್ಲದಕ್ಕೆ ಬೇರೆ ದಾರಿಯಿಲ್ಲದೆ ಶೋಂಭಯ್ಯನಿಂದಲೇ ಮಂತ್ರ ಮಾಡಿಸಿ ಮಾಮೂಲಿಯಂತಾದ.

ಚಿಕ್ಕಣ್ಣನವರ ಕಥೆಗಳಲ್ಲಿ ಪ್ರಮುಖವಾಗಿ ಗಮನಿಸುವ ಮತ್ತೊಂದು ಅಂಶವೆಂದರೆ ಗಂಡು ಪಾತ್ರಗಳಂತೆ ಹೆಣ್ಣು ಪಾತ್ರಗಳೂ ನಿರ್ಭಿಡತೆಯಿಂದ ಕೂಡಿರುವಂತಹದ್ದು. ಇಂತಹ ನಿರ್ಭಿಡತೆ ಪಿತೃಪ್ರಧಾನ ಸಮಾಜವು ಉತ್ತಮವೆಂದು ನಂಬಿಕೊಂಡು ಬಂದಿರುವ ಮೌಲ್ಯಗಳನ್ನು, ಪದ್ಧತಿಗಳನ್ನು ಪ್ರಶ್ನಿಸುವ ಆ ಮೂಲಕ ಒಡೆಯುವಿಕೆಗೆ ಕಾರಣವಾಗುತ್ತದೆ.

'ಬೆವರಿನ ವಾಸನೆ' ಕಥೆಯ ಆಂಟಿ, 'ನೆರೆ'ಯ ಪುಟ್ಟಬಸವನ ತಾಯಿ ಮತ್ತು 'ಪರೆಬಿಟ್ಟ ಹುಡುಗ' ಕಥೆಯ ರಾಜಕ್ಕ, 'ಸಪ್ಪಳಗಳು' ಕಥೆಯ ಗೌಡನ ಹೆಂಡತಿ, 'ತೆರೆ ತೆರೆ ಸರಿದಂತೆ' ಕಥೆಯ ಮಾದಿ–ಈ ಎಲ್ಲಾ ಪಾತ್ರಗಳ ನಡವಳಿಕೆ ಪುರುಷನೊಬ್ಬ ಸ್ತ್ರೀಯ ಮೇಲೆ ಮಾನಸಿಕವಾಗಿ, ದೈಹಿಕವಾಗಿ ಅನೇಕ ರೀತಿಯಲ್ಲಿ ಅತ್ಯಾಚಾರ ಮಾಡುತ್ತಿರುವ ಈ ಶತಮಾನದಲ್ಲೂ ಪ್ರತೀಕಾರದಂತೆ ಅನೈತಿಕವಾದರೂ ನಿರ್ಭಯವಾಗಿ ನಡೆದುಕೊಳ್ಳುವುದನ್ನು ಕಾಣಬಹುದು.

ಮೇಲೆ ತಿಳಿಸಿದ ಪಾತ್ರಗಳು ಪಿತೃ ವ್ಯವಸ್ಥೆಯ ಮೌಲ್ಯದಾಚೆಗೆ ನಿಲ್ಲುವ ಪಾತ್ರಗಳು. 'ಗಂಡನನ್ನು ಬಿಟ್ಟು ಇನ್ಯಾರನ್ನೂ ಮೋಹಿಸಬಾರದು ಎನ್ನುವ ಪತಿವ್ರತಾ ಆದರ್ಶ ಇವುಗಳ ಮಟ್ಟಿಗೆ ದೊಡ್ಡ ಮೌಲ್ಯವೇನಲ್ಲ. ಕಾರಣ–ಸಮಾಜದ ಶ್ರೇಣೀಕರಣದ ಕೆಳವರ್ಗದ ಪಾತ್ರಗಳಿಗೆ ಹೆಚ್ಚಿನ ಸ್ವಾತಂತ್ರ್ಯವಿರುತ್ತದೆ. ಮಧ್ಯಮ ವರ್ಗದ ಮತ್ತು ಮೇಲ್‌ಮಧ್ಯಮವರ್ಗದವರನ್ನು ಕಾಡುವ ನೈತಿಕ ಕಟ್ಟುಪಾಡುಗಳು ಇವರನ್ನು ಅಷ್ಟಾಗಿ ಕಾಡುವುದೇ ಇಲ್ಲ. ಈ ರೀತಿಯ ಚಿತ್ರಣಕ್ಕೆ ಕಾರಣ ಆದಿಮಾನವ ಸಂಸ್ಕೃತಿಗೆ ಹತ್ತಿರವಾದದ್ದು. ಅಂದರೆ ಪಿತೃ ಮೌಲ್ಯಗಳು ಬಲಿಷ್ಠವಾಗುವ ಮುಂಚೆ, ಆದಿಮಾನವ ಸಂಸ್ಕೃತಿಯಲ್ಲಿ ಸ್ತ್ರೀಯರು ಹೆಚ್ಚು ಪ್ರಕೃತಿ ಸಹಜವಾಗಿ ವರ್ತಿಸುತ್ತಿದ್ದರು ಮತ್ತು ಸಂಸ್ಕೃತಿ ಬೆಳೆದಂತೆ ಅವರ ಮೇಲಿನ ನಿಯಂತ್ರಣ ಅಧಿಕವಾಗುತ್ತಾ ಹೋಯಿತು ಎನ್ನಬಹುದು.

ಗಂಡನಿಂದ ತ್ಯಜಿಸಲ್ಪಟ್ಟ ಪ್ರತಿಯೊಬ್ಬ ಪತಿವ್ರತೆಯೂ ಸೀತಾಮಾತೆಯಂತೆ, ಹಠ ಸಾಧಿಸಿದ ಗರತಿಯರೆಲ್ಲಾ ಪಾಂಚಾಲಿಯ ದಾರಿಯಲ್ಲಿ ನಡೆದಂತೆ. ಅದಕ್ಕೆ ನಮ್ಮ ಸಾಹಿತ್ಯ ಕಲಾರೂಪಗಳಲ್ಲಿಯೂ ಸೀತೆಯ ಸಹನೆಗಿರುವ ಬೆಲೆ ಪಾಂಚಾಲಿಯ ಹಠಕ್ಕಿಲ್ಲ. ಈ ಪೌರಾಣಿಕ ಮೌಲ್ಯಗಳ ಆಯ್ಕೆ ನಮ್ಮ ಜೀವನದ ಎಳೆ ಎಳೆಯಲ್ಲೂ ಹೊಕ್ಕಿದೆ ಎಂದು ನನಗೆ ಅನಿಸುತ್ತದೆ. ಜಂಜಾಟಕ್ಕೆ ಸಿಕ್ಕಿದ ಪ್ರತಿ ಭಾರತೀಯ ಹೆಂಗಸಿಗೂ ಇರುವ ಸಾಧ್ಯತೆ, ಸೀತೆ ಪಾಂಚಾಲಿಯ ಮಾರ್ಗಗಳು ಅಂದರೆ ಅವೆರಡೂ ಸಂಪೂರ್ಣವಾಗಿ ಒಂದಕ್ಕೊಂದು ವಿರುದ್ಧ ಎಂದಲ್ಲ.

ಪಾಂಚಾಲಿಯ ಹಠವನ್ನು ಸರಿ ಎನ್ನುವವರೂ ಬಹಳ ಜನ ಇದ್ದಾರೆ. ಆದರೆ ಕೈ ಮುಗಿಯುವುದು ಮಾತ್ರ ಸೀತಾದೇವಿಗೆ. ಪಾಂಚಾಲಿಗೆ ಕೈಮುಗಿಯುವುದಿಲ್ಲವಾದರೂ "ಪಂಚ ಕನ್ಯಾಸ್ಮರೇನ್ನಿತ್ಯಂ ಮಹಾಪಾತಕ ನಾಶನಂ" ಎನ್ನುವಲ್ಲಿ ದ್ರೌಪದಿಯು ಒಬ್ಬಳೆಂದು ಹೇಳಲಾಗುತ್ತದೆ."[೧೩]

ಆದರೆ ಚಿಕ್ಕಣ್ಣನವರ ಕಥೆಗಳಲ್ಲಿ ಕಂಡುಬರುವ ಸ್ತ್ರೀಯರಲ್ಲಿ ಯಾವುದೇ ಆದರ್ಶದ ಭಾರ, ಸಂಪ್ರದಾಯದ ಅಳುಕಾಗಲೀ ಇಲ್ಲ. ಆದರ್ಶಮಯತೆ, ಸಂಪ್ರದಾಯಕತೆ ಎನ್ನುವಂತಹ ಮುಖವಾಡಗಳನ್ನೇ ಕಳಚಿ ಸಹಜತೆಗೆ, ಸಹಜ ಬದುಕಿನ ಅನಿವಾರ್ಯತೆಗೆ ತಮ್ಮನ್ನು ತಾವು ಒಡ್ಡಿಕೊಳ್ಳುವಿಕೆಯನ್ನು ಇಲ್ಲಿನ ಸ್ತ್ರೀಯರಲ್ಲಿ ಕಾಣಬಹುದು. 'ಪರೆ ಬಿಟ್ಟ ಹುಡುಗ' ಕಥೆಯಲ್ಲಿನ ರಾಧಕ್ಕ, 'ಸಪ್ಪಳಗಳು' ಕಥೆಯ ಗೌಡನ ಹೆಂಡತಿ ಶತಶತಮಾನಗಳಿಂದ ಸ್ತ್ರೀಯನ್ನು ಶೋಷಿಸುತ್ತಿರುವ ಪುರುಷರನ್ನು ನಾಶಮಾಡಲು ತಾವು ಕಂಡುಕೊಂಡ ನೆಲೆಯೇನೋ ಅನ್ನಿಸುತ್ತದೆ.

ಸಿಮೋನ್ ದೆ ಬೋವಾ ಅವರ ಆತ್ಮ ಚರಿತ್ರೆಯಲ್ಲಿ ಆಕೆಯ ಗೆಳತಿಯೊಬ್ಬಳ ಕಥೆ ಇದೆ. ಇಬ್ಬರೂ ಸೂಕ್ಷ್ಮಮತಿಯವರು, ಮಹತ್ವಾಕಾಂಕ್ಷೆಯುಳ್ಳವರು. ಸಿಮೋನ್ ತನ್ನ ವಿದ್ಯಾಭ್ಯಾಸಕ್ಕಾಗಿ ತಾನಿದ್ದ ಊರಿನಿಂದ ಪ್ಯಾರಿಸ್ಸಿಗೆ ಹೋದವಳು ಅಲ್ಲೇ ಉಳಿದು, ಕೆಲಸ ಹುಡುಕಿಕೊಂಡು, ತನ್ನ ಸಂಪ್ರದಾಯಸ್ಥ ಮನೆತನದ ಕಪಿಮುಷ್ಠಿಯಿಂದ ಬಿಡುಗಡೆ ಹೊಂದಿದ್ದಳು. ಈಕೆಯಷ್ಟೇ ಬುದ್ಧಿವಂತೆಯಾದ ಗೆಳತಿ ತನ್ನ ಚಿಕ್ಕ ಊರಿನ, ಮನೆಯವರ ಕೋಟಲೆಯಿಂದ ಪಾರಾಗಲು ಸಾಧ್ಯವಿಲ್ಲದೆ, ತಾನು ವರಿಸಲು ಇಚ್ಚಿಸಿದಾತನ ಬಗೆಗೆ ಮನೆಯವರು ಸೃಷ್ಟಿಸಿದ ಅಡ್ಡಿ ಆತಂಕಗಳನ್ನು ಎದುರಿಸಲಾರದೆ, ಬುದ್ಧಿ ಭ್ರಮಣೆಯಾಗಿ, ಮೆದುಳಿನ ಜ್ವರ ಬಂದು ಮರಣ ಹೊಂದಿದ ಕತೆಯನ್ನು ಸಿಮೋನ್ ತಮ್ಮ 'ಖಜಭಿಂಟಿಜ ,ಜಥ' ಕೃತಿಯಲ್ಲಿ ಬರೆದಿದ್ದಾರೆ. ಸಂಕುಚಿತ ಮನೋಭಾವದ ವಾತಾವರಣದಿಂದ ಆಕೆಗೆ ಹೊರಬರಲಾಗಿದ್ದರೆ ಸಾವಿನಂಥ ಕ್ರೂರ ಶಿಕ್ಷೆಗೆ ಆಕೆ ಗುರಿಯಾಗುತ್ತಿರಲಿಲ್ಲ ಎನ್ನಬಹುದು.

ಪುರುಷಸಮಾಜ ಸ್ತ್ರೀಯ ಪ್ರತೀ ಸಂದರ್ಭವನ್ನು ತನಗೆ ಬೇಕಾದ ರೀತಿಯಲ್ಲಿ ಉಪಯೋಗಿಸಿಕೊಳ್ಳುತ್ತದೆ. ಹೆಣ್ಣು ಮಗುವೊಂದು ಜನಿಸಿದ ದಿನದಿಂದ ಆಕೆಯ ಬಗೆಗೆ ಸ್ವಾರ್ಥ ಚಿಂತನೆ ಬೆಳೆಯತೊಡಗುತ್ತದೆ. ತಂದೆಯ ಮನೆಯಲ್ಲಿಯೇ ಶೋಷಣೆ ಪ್ರಾರಂಭವಾಗಿ ಆಕೆ ಗಂಡನ ಮನೆ ಸೇರಿದಾಗಲೂ ಇನ್ನೊಂದು ರೂಪದಲ್ಲಿ ಅದು ಗೋಚರಿಸುತ್ತಾ ಹೋಗುತ್ತದೆ. ತಂದೆಯ ಮನೆ ಮತ್ತು ಗಂಡನ ಮನೆ ಇವೆರಡರ ಮಧ್ಯೆಯೂ ಸ್ತ್ರೀ ಸಮಾಜದ ಸ್ವಾರ್ಥಕ್ಕೆ

ಬಲಿಯಾಗುವ ಸಂಭವಗಳಿಗೇನೂ ಕಡಿಮೆಯಿಲ್ಲ. ಇಂತಹ ಪ್ರಮುಖ ಅಂಶಗಳನ್ನೊಳಗೊಂಡ ಕಥೆ 'ನಿಚ್ಚಯ' ಮತ್ತು 'ಜಪದಕಟ್ಟೆ'. 'ನಿಚ್ಚಯ' ಕಥೆಯಲ್ಲಿನ ಗೀತಳನ್ನು ಅಧಿಕಾರದ, ಜಾತಿಯ ಮದವೇರಿದ ವ್ಯವಸ್ಥೆ ಹೇಗೆಲ್ಲಾ ಬಳಸಿಕೊಳ್ಳುತ್ತದೆ.

ಹೆಣ್ಣು ಗಂಡಿನಂತೆ, ಮಗಳು ಮಗನಂತೆ ಬೆಳೆದು, ಗಂಡಿನ ಸ್ಥಾನದಲ್ಲಿ ತವರು ಅಥವಾ ಗಂಡನ ಮನೆಯಲ್ಲಿ, ಗಂಡಿನ ಎಲ್ಲಾ ಕಾರ್ಯಗಳನ್ನು ನಿರ್ವಹಿಸಿದರೂ ಅವಳ ಸಾಮಾಜಿಕ ಸ್ಥಾನಮನ ಹೆಣ್ಣಿಗಿಂತ ಭಿನ್ನವಗಿ ಉತ್ತಮವಾಗಿರುವುದಿಲ್ಲ. "ಹೆಣ್ಣು ನಾಲ್ಕು ಗೋಡೆಗಳ ನಡುವೆ, ಹೆಣ್ಣು ಪಿರ್ಕದ ಒಳಗೆ, ಆಟೆಲ್ಲ ಗೋಕುರ್ತಿ ನೀಸಿದರೂ ಹೊರಗೆಲ್ಲಿ ಅವಳೂರಿದ ಹೆಜ್ಜೆ ಗುರುತುಗಳು?

ಕಥೆ ಪ್ರಾರಂಭವಾಗುವುದೇ 'ಮುಗಿಲೆತ್ತರಕ್ಕೆ ಏರಿದ್ದ ಧೂಳು ನಿಧಾನವಾಗಿ ಅಡಗುತ್ತಿತ್ತು' ಎಂಬ ವಾಕ್ಯದಿಂದ ಧೂಳು-ಮುಗಿಲನ್ನೆಲ್ಲ ಆವರಿಸಿದಂತೆ ಅನೇಕ ಸುಳ್ಳುಗಳು ನಿಜವೆಂಬಂತೆ ತಾರಕಕ್ಕೇರಿ ಗೀತಾಳ ಮನಸ್ಸನ್ನು, ಚಾರಿತ್ರ್ಯವನ್ನು ಮಸುಕಾಗಿಸಿತ್ತು. ಜಾತಿ ವ್ಯವಸ್ಥೆಯ ಕರಾಳ ಜಗತ್ತಿನಲ್ಲಿ ಸಿಲುಕಿದ್ದವಳು ಗೀತಾ. ಈಕೆ ಬ್ರಾಹ್ಮಣರ ಹುಡುಗಿ; ತನ್ನ ತಂದೆಗೆ ಗಂಡು ಮಕ್ಕಳಿಲ್ಲದ ಕಾರಣ ಐದು ಜನ ಹೆಣ್ಣು ಮಕ್ಕಳಲ್ಲಿ ಇವಳು ಮೂರನೆಯವಳು. ಒಬ್ಬಳು ತೀರಿಕೊಂಡಿದ್ದಳು. ಅತ್ಯಂತ ಮಡಿವಂತ ಕುಟುಂಬ ಇವರದ್ದು: ಇವಳು ಪಟ್ಟಣದಲ್ಲಿ ಹೈಸ್ಕೂಲಿನವರೆಗೂ ಓದಿದ್ದಳು ಮತ್ತು ಎಲ್ಲರಿಗಿಂತ ಚೂಟಿಯಾಗಿದ್ದಳು ಹಾಗೂ ಅಪ್ಪನಿಗೆ ಗದ್ದೆಯ ಕೆಲಸದಲ್ಲೂ ಗಂಡು ಮಗನಂತೆ ಹೆಗಲು ಕೊಟ್ಟಿದ್ದಳು. ಇಂತಹ ಗಟ್ಟಿಗಿತ್ತಿಯನ್ನು ತಮ್ಮ ಜಾತಿ, ಕುಲದ ಪ್ರತಿಷ್ಠೆಗಾಗಿ, ತಮ್ಮ ಸ್ವಾರ್ಥದ, ದ್ವೇಷದ ಸಾಧನೆಗಾಗಿ ಊರಿನ ಶಾನುಭೋಗ ಮತ್ತು ಚಂದ್ರೇಗೌಡರು ಹೇಗೆ ಬಳಸಿಕೊಳ್ಳುತ್ತಾರೆಂಬ ಚಿತ್ರಣವಿದೆ.

ಗದ್ದೆಯ ಕೆಲಸದಲ್ಲಿನ ಸಲುಗೆಯಿಂದ ಗೀತಾಳನ್ನು ಮಾತನಾಡಿಸುತ್ತಾ ಇದ್ದವನು ದಲಿತರ ಚಲುವಾದಿ. ಗೀತಾ ಮತ್ತು ಚಲುವಾದಿ ಗೆಳೆತನ ಜಾತಿ ನೀತಿಯನ್ನೆಲ್ಲ ಮೀರಿ ಬೆಳೆಯಿತು. ಸಂಕೋಚವಿಲ್ಲದ ಮಾತುಗಾರಿಕೆ ಇವರೀರ್ವರ ನಡುವೆಯೂ ಇತ್ತು. ಆದರೆ ಚೆಲುವಾದಿ ಆ ಸಲುಗೆಯನ್ನು ಬೇರೆ ರೀತಿ ತಿಳಿದುಕೊಂಡ. ಅದೇ ಸಲುಗೆಯಿಂದ ಒಮ್ಮೆ ಗೀತಾ ಹೊಲದಲ್ಲಿ ಮೆಣಸಿನ ಹಣ್ಣು ಬಿಡಿಸುತ್ತಿದ್ದ ಸಂದರ್ಭದಲ್ಲಿ ಅವಳ ಕೈಹಿಡಿದುಕೊಂಡ. ಅನಿರೀಕ್ಷಿತ ಘಟನೆಗೆ ತಬ್ಬಿಬ್ಬಾದ ಗೀತಾ 'ಛೀ ಹೊಲೆ ಸೂಳೆ ಮಗನೆ ಇಷ್ಟಕ್ಕೇ ತೋರಿಸ್ತಿಯಲ್ಲ ನಿನ್ ಬುದ್ಧಿ ಬಿಡು ಬಿಡು ನಿನ್ ಮುಖಕ್ಕೆ ಮಂಗಳಾರ್ತಿ ಎತ್ತ"[೧೪] ಎಂಬ ಮಾತಿಗೆ ಪ್ರತಿಯಾಗಿ "ಆ ಶಾನುಭಾಗ, ನಿಮ್ಮ ಕೇರಿಯೋರು ಆದ್ರೆ ನಮ್ಮೋರ್ನ ಹೆಂಗೆ ಬೇಕಾದ್ರು ಮಜಾ ಮಾಡಬಹುದು. ನಾವು ಮಾತ್ರ

ನಿಮ್ಮನ್ನು ಮುಟ್ಟಿಸಿಕೊಳ್ಳೊ ಹಂಗೂ ಇಲ್ವಾ"[೧೫] ಎಂದು ಹೇಳುತ್ತಾನೆ. ಇನ್ನೇನೋ ಅನಾಹುತ ಸಂಭವಿಸಬಹುದೆಂದು ಕಿರುಚುತ್ತಾ ಓಡುವಾಗ ಬಿದ್ದು, ಹೊತ್ತಿದ್ದ ಮೆಣಸಿನ ಹಣ್ಣೆಲ್ಲಾ ಚೆಲ್ಲಾಪಿಲ್ಲಿಯಾಗಿ ಅವಳ ಬಟ್ಟೆ ಬರೆಯೆಲ್ಲ ಅಸ್ತವ್ಯಸ್ತವಾಗಿರುವುದನ್ನು ಅಲ್ಲೆ ದನ, ಆಡು, ಕುರಿ ಮೇಯಿಸುತ್ತಿದ್ದವರು ಬಂದು ನೋಡುವಾಗ ಎಂಥವರಿಗೂ ಅನುಮಾನ ಬರುವ ರೀತಿಯಲ್ಲಿತ್ತು ಆಗಿನ ಸ್ಥಿತಿ.

ಕೀಳು ಕುಲದವನೊಬ್ಬ ಬ್ರಾಹ್ಮಣರ ಮಗಳನ್ನು ಕೈಹಿಡಿದೆಳೆದ ಎಂಬೀ ಒಂದೇ ಕಾರಣಕ್ಕಾಗಿ ಅವನನ್ನು ಶಾಶ್ವತ ತಪ್ಪಿತಸ್ತನನ್ನಾಗಿಸುವ ಹುನ್ನಾರದಿಂದ ಗೀತಾಳನ್ನು ಮಾನಭಂಗ ಮಾಡಿದ್ದಾನೆಂದು ಊರೆಲ್ಲ ಗುಲ್ಲೆಬ್ಬಿಸಿ ಅವಳ ಚಾರಿತ್ರ್ಯವನ್ನೇ ಪಣಕ್ಕಿಡುವ ವ್ಯವಸ್ಥೆಯ ಅನಾವರಣ ನಿಚ್ಚಯ ಕಥೆಯಲ್ಲಿದೆ.

ಇಡೀ ಕತೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಎರಡು ವಿಷಯಗಳು ಸ್ಪಷ್ಟವಾಗುತ್ತವೆ. ಚಲುವಾದಿ ಮೊದಲ್ಗೊಂಡು ಗೀತಾಳ ತಂದೆ–ತಾಯಿ, ಶಾನುಭೋಗ, ಚಂದ್ರೇಗೌಡ ಎಲ್ಲರಿಂದಲೂ ನಡೆಯುವ ಶೋಷಣೆಯ ಕಾರ್ಯ ಮತ್ತು ಇಂತಹ ಕ್ರೌರ್ಯದ ವಿರುದ್ಧ ಮೌನವಾಗಿಯೇ ಪ್ರತಿಭಟಿಸುತ್ತಿದ್ದು ಗೀತಾ ಕೊನೆಯಲ್ಲಿ ಅನಾರೋಗ್ಯ ವ್ಯವಸ್ಥೆಗೆ ಚಿಕಿತ್ಸೆಯಾಗುವಂತಹ ರೀತಿಯಲ್ಲಿ ಬಂಡಾಯದ ನೆಲೆಯ ನಿರ್ಧಾರವನ್ನು ತಳೆದದ್ದನ್ನು ಕಾಣಬಹುದು.

ಶತಶತಮಾನಗಳಿಂದಲೂ ಮೇಲ್ವರ್ಗದವರಿಂದ ಸದಾ ಅವಮಾನಕ್ಕೆ ತನು ಮನ ಧನ ಎಲ್ಲವನ್ನೂ ಮುಡುಪಾಗಿಟ್ಟ ದಲಿತ ಸಮುದಾಯವು ಒಮ್ಮೆಯಾದರೂ ಸ್ಫೋಟಿಸುವ ತುಡಿತದಿಂದ ಕಾಯುತ್ತಿರುತ್ತದೆ. ಹಾಗೆಯೇ ಚಲುವಾದಿಯೂ ಸಹ ಗೀತಾಳನ್ನು ನಡೆಸಿಕೊಳ್ಳುತ್ತಾನೆ. ತಮ್ಮವರ ನೋವು ಆತನನ್ನು ಹಾಗೆ ಮಾಡಿಸುತ್ತದೆ. ಮೇಲ್ವರ್ಗದವರ ಮೇಲಿನ ಕೋಪವನ್ನು ತೀರಿಸಿಕೊಳ್ಳಲು ಒರಟಾಗಿ ಗೀತಾಳ ಕೈಹಿಡಿದು ಎಳೆದದ್ದು ಪ್ರತಿಷ್ಠೆ ಮೆರೆಯುವುದಕ್ಕೇ ಎನ್ನಬಹುದು. ಹಾಗೆಯೇ ಕೇವಲ ಕೈಹಿಡಿದು ಎಳೆದದ್ದನ್ನೇ ದೊಡ್ಡದು ಮಾಡಿ ತಮ್ಮ ಪ್ರತಿಷ್ಠೆ ಮೆರೆಯುವುದಕ್ಕೋಸ್ಕರ ಶಾನುಭೋಗ, ಚಂದ್ರೇಗೌಡರು 'ಚಲುವಾದಿ ಗೀತಾಳನ್ನು ಹಾಳು ಮಾಡಿದ' ಎಂಬ ಸುಳ್ಳು ಸುದ್ದಿ ಹಬ್ಬಿಸಿ ಪಂಚಾಯ್ತಿ, ಪೋಲೀಸು, ಸ್ಟೇಷನ್ನು ಎಂದೆಲ್ಲ ಹೋಗಿ, ಸ್ಟೇಷನ್ನಿಗೇ ಬಂದು 'ಮಾನಭಂಗ ಮಾಡಿರುವುದು ನಿಜ'ವೆಂದು ಒಪ್ಪಿಕೊಳ್ಳುವಂತೆ ಅವಳ ಮೇಲೆ ತೋರುವ ಬಣ ಸಹಾನುಭೂತಿ, ಸಂಕಟ, ತೋರ್ಕೆ ಮಾತುಗಳ ಮೂಲಕ ಪ್ರತಿಷ್ಠೆ ಮೆರೆಯಲು ಕಚ್ಚೆ ಕಟ್ಟಿ ನಿಂತಿದ್ದರು. ಸಾಲದೆಂದು ಗೀತಾಳ ತಂದೆಯನ್ನು ಇಕ್ಕಟ್ಟಿನ ಸ್ಥಿತಿಗೆ ತಂದೊಡ್ಡಿದ್ದರು.

ಅತ್ಯಂತ ಪ್ರೀತಿಪಾತ್ರಳಾದ ಮಗಳು ಇಂತಹ ಹೀನ ಸ್ಥಿತಿಗೆ ಸಿಲುಕಿದಳೆಂದು ಒಳಗೊಳಗೇ ಕೊರಗುತ್ತಿದ್ದರೂ ನೆರೆಹೊರೆಯವರ ಭಯಕ್ಕೆ ಅದನ್ನು ತೋರ್ಪಡಿಸಿಕೊಳ್ಳದೆ ಮಗಳನ್ನೇ ದೂಷಿಸುವ ಸ್ಥಿತಿಗೆ ಊರಿನವರು ತಂದಿರುತ್ತಾರೆ. ಮನೆಯಲ್ಲಿಯೂ ಸಹ ತಾಯಿಯೂ ಅವಳನ್ನು ಮುಟ್ಟಿಸಿಕೊಳ್ಳದೆ ಪ್ರತ್ಯೇಕ ಕೋಣೆಯೊಂದರಲ್ಲಿಟ್ಟು ಚಿಲವಾರದ ತಟ್ಟೆ, ಲೋಟ, ದೂರದಿಂದ, ಹತ್ತಿರಕ್ಕೆ ಸರಿಯದ, ಹಾಕುವ ಊಟ–ಎಲ್ಲವನ್ನೂ ಕಂಡು ಇದೊಂದು ಜೀವವಿಲ್ಲದ ಧರ್ಮ. ಸಾಯಲು ಬಿಡದ ಕರುಣೆ ಎನ್ನಿಸಿತು. ಧರ್ಮದ ಹೆಸರಿನಲ್ಲಿ ಬೆಳೆಸಿಕೊಂಡಿರುವ ತಮ್ಮ ತಮ್ಮ ಪ್ರತಿಷ್ಠೆಗೆ ಜೀವ ತುಂಬಲು ಅವರು ಪರಿತಪಿಸುತ್ತಿದ್ದ ರೀತಿ ಕಂಡು ಅಸಹ್ಯವೆನಿಸಿ, ಚಲುವಾದಿಯನ್ನೇ ವರಿಸುವ ನಿರ್ಧಾರ ಮಾಡುತ್ತಾಳೆ. ಅದನ್ನು ಬಹಿರಂಗವಾಗಿಯೇ ಆ ನಿರ್ಧಾರವನ್ನು ಹೇಳಲು ಹೊರಡುವುದು ಬಂಡಾಯದ ಪ್ರವೃತ್ತಿ ಎನಿಸಿಕೊಳ್ಳುತ್ತದೆ. ಸಮಾಜದ ನಿಯಮಗಳು ಒಂದನ್ನು ಸಾರುತ್ತಿದ್ದರೆ ವಾಸ್ತವದ ಬದುಕು ಮತ್ತೊಂದು ರೂಪದಲ್ಲಿ ಇರುವುದನ್ನು ತಿಳಿಸುತ್ತದೆ.

ಇಲ್ಲಿ ವ್ಯಕ್ತವಾಗುವ ಅಂಶವೆಂದರೆ ಬಾಹ್ಯ ಒತ್ತಡ, ಪರಿಸ್ಥಿತಿಯ ಪೇಚು ಇವೆರಡರ ನಡುವೆ ಗೊಂದಲಕ್ಕೀಡಾದಾಗ ಸುಪ್ತ ಮನಸ್ಸಿನಲ್ಲಿದ್ದ ಭಾವನೆಗಳಿಗೆ ಮೌಲ್ಯಧಾರಣೆ ಮಾಡಿ ಬಾಹ್ಯ ಒತ್ತಡಕ್ಕೆ ತನ್ನ ಪರಿಸ್ಥಿತಿಗೆ ತನ್ನದೇ ಆದ ಆದರೂ ಸೂಕ್ತವಾದ ಬಂಡಾಯದ ನೆಲೆಯನ್ನು ಕಂಡುಕೊಳ್ಳುವುದನ್ನು ನೋಡಬಹುದು. ವರ್ತಮಾನದ ಘಟನೆ ಮತ್ತು ಆ ಘಟನೆಗೆ ವ್ಯಕ್ತಿ ಮುಖಾಮುಖಿಯಾದಾಗ ಸತ್ಯ ತೆರೆದುಕೊಳ್ಳುತ್ತದೆ ಹಾಗಾಗಿಯೇ ಗೀತಾಳ ಮನಸ್ಸಿನಲ್ಲಿ ಎಂದೊ ಉದಯಿಸಿದ ಚಲುವಾದಿಯ ಮೇಲಿನ ಅಂತಃಕರಣದ ಭಾವನೆ ನಂತರ ಮೂರ್ತರೂಪ ಪಡೆಯುವಂತಾಗುತ್ತದೆ.

ಸ್ತ್ರೀ ಮೇಲಿನ ಶೋಷಣೆಯು ಗ್ರಾಮೀಣ ಪ್ರದೇಶಕ್ಕಷ್ಟೇ ಮೀಸಲಾಗಿರದೆ ನಗರ ಪ್ರದೇಶಗಳನ್ನೂ ಆವರಿಸಿಕೊಂಡಿರುವುದನ್ನು ಈಗಾಗಲೇ 'ಹಸಿರು ಹರಳಿನುಂಗುರ' ಕಥೆಯ ಲಕ್ಷ್ಮಿಯ ಮುಖೇನ ವಿವೇಚಿಸಲಾಗಿದೆ. ಹಾಗೆ 'ಪಾಡು', 'ತಿರಿದುಣ್ಣುವ ಜನರ ನಡುವೆ', 'ಕಾಲಾಯ......' ಕಥೆಗಳಲ್ಲಿಯೂ ನಗರ ಬದುಕಿನ ನಶ್ವರತೆ ಮತ್ತು ಬಂಡವಾಳಶಾಹಿಗಳ ಶೋಷಣೆಯನ್ನು ಕಾಣಬಹುದು.

'ತಿರಿದುಣ್ಣುವ ಜನರ ನಡುವೆ' ಕಥೆಯನ್ನು ವಿಶ್ಲೇಷಿಸುವುದಾದರೆ–'ದೂರದ ಬೆಟ್ಟ ನುಣ್ಣಗೆ'–ಅನ್ನುವ ಹಾಗೆ ಬೆಂಗಳೂರು, ಮೈಸೂರು ಮುಂತಾದ ಪಟ್ಟಣಗಳಲ್ಲಿ ಸುಖವಾಗಿ ಬದುಕಬಹುದು. ಕೆಲಸಕ್ಕೇನೂ ಕೊರತೆಯಿಲ್ಲ ಎಂಬಂತಹ ಲೋಕಾರೂಢಿ ಮಾತಿಗೆ ಇಲ್ಲಿ

ತದ್ವಿರುದ್ಧದ ಸ್ಥಿತಿಯನ್ನೂ ನೋಡಬಹುದು. ಕೂಲಿ ಮಾಡುವ, ಕಟ್ಟಡಗಳನ್ನು ಕಟ್ಟುವ ಕೂಲಿ ಕಾರ್ಮಿಕರ ಅದರಲ್ಲೂ ಮಹಿಳೆಯೊಬ್ಬಳ ಸ್ಥಿತಿಯ ಚಿತ್ರಣವಿದೆ. ಬಂಡವಾಳಶಾಹಿಗಳು ಯಾವ ರೀತಿ ಅಮಾನವೀಯತೆಯನ್ನು ಮೆರೆಯುತ್ತಾರೆ, ಯಾವ ಜೀವಿಯೂ ಲೆಕ್ಕಕ್ಕಿಲ್ಲ ಅವರ ಪ್ರತಿಷ್ಠೆಯ ಮುಂದೆ. ಅಸಹಾಯಕ ಹೆಣ್ಣು ಮಗಳೊಬ್ಬಳು ಮೂವರು ಮಕ್ಕಳನ್ನು ಕಟ್ಟಿಕೊಂಡು ಕಟ್ಟಡದ ಕೆಲಸದಲ್ಲಿ ತನ್ಮಯತೆಯಿಂದ, ಪ್ರಾಮಾಣಿಕವಾಗಿ ದುಡಿಯುತ್ತಿದ್ದರೂ ಆಘಾತಕಾರಿಯಾಗುವಂತ ಸಂದರ್ಭ ಬರುತ್ತದೆ. ಕೆಲಸ ನಿಲ್ಲಿಸಿದುದರ ಪರಿಣಾಮವಾಗಿ ಬದುಕಿಗೆ ಆಧಾರವಾಗಿ ಕೂಲಿಯೂ ಸಿಗದೇ ಇರುವ ಪರಿಸ್ಥಿತಿ ಎದುರಾದಾಗ ಅವಳ ಮನಸ್ಸಿನ ಮೇಲೆ ಬೀರುವ ಪ್ರಭಾವ ಮನಕಲಕುವಂಥದ್ದು. ಎಲ್ಲ ಕೂಲಿಗಳೂ ಗಂಟುಮೂಟೆ ಕಟ್ಟಿಕೊಂಡು ಹೋದರೂ ಸಹ ಅವಳು ಮಾತ್ರ ಅಲ್ಲೇ ಇದ್ದು "ತಿರುಗ ಇಲ್ಲಿ ಕೆಲ್ಸ ಕೊಡ್ತಾರಲ್ಲ?"[೧೬] ಎನ್ನುವ ಮಾತು ಇಡೀ ವ್ಯವಸ್ಥೆಯನ್ನು ಪ್ರಶ್ನಿಸುವಂತದ್ದು.

ನಗರ ಬದುಕಿನ ಜಂಜಾಟದಲ್ಲಿ ಹೆಣ್ಣೊಬ್ಬಳು ಹೇಗೆ ನಲುಗಿ, ಸವೆದು ಹೋಗುತ್ತಾಳೆ ಎನ್ನುವ ಚಿತ್ರಣವನ್ನು 'ಕಪ್ಪು ಮನಸ್ಸಿನ ಮೇಲೆ ಬರೆದ ಬಿಳಿ ಅಕ್ಷರ' ಕಥೆಯಲ್ಲಿ ಕಾಣಬಹುದು. ಈ ಕಥೆಯಲ್ಲಿ ಬರುವ ಸೀತೆ ಪುರುಷ ಸಮಾಜದ ಧೋರಣೆಗೆ ತಾನೂ ಸಿಕ್ಕಿಕೊಂಡು ಅದನ್ನೇ ಒಪ್ಪಿಕೊಂಡಿರುವುದನ್ನು ಕಾಣಬಹುದು. ಗಂಡುಮಗುವನ್ನು ಪಡೆಯುವ ಆಸೆಯಿಂದ ಐದು ಹೆಣ್ಣುಮಕ್ಕಳ ತಾಯಿಯಾಗಿರುತ್ತಾಳೆ. ಆದರೂ ನೆಮ್ಮದಿಯಾಗಿರುವುದಿಲ್ಲ. ಅವಳ ಮಾತಿನಲ್ಲೇ ಅದನ್ನು ಗುರ್ತಿಸಬಹುದು.

> "ಈಗಿಂದೂ ಗಂಡಂತೆ, ನಿನ್ನ ಹೆಂಡ್ತಿ ಹೆಂಗವಳೆ, ಆರೋಗ್ಯಾನಾ? ನೀನೇ ಪುಣ್ಯವಂತ ಎರಡೂ ಗಂಡೇ, ನಂಗೆ ಒಂದಾದ್ರೂ ಗಂಡಾಗಲಿ ಅಂತ ಪ್ರತಿ ಸಲವೂ ಕಾದೆ. ಐದೂ ಹೆಣ್ಣಾದೋ. ಆದ್ರೂ ಆಗ್ಲಿ ಅಂತ ಐದ್ನೇದ್ಕೆ ಆಪ್ಲೇಸನ್ ಮಾಡಿಸ್ಕೊಂಡುಬುಟ್ಟೆ"[೧೭]

ಎಂಬಲ್ಲಿ ಅವಳ ಅಸಹಾಯಕ ಸ್ಥಿತಿಯನ್ನು ಧ್ವನಿಸುತ್ತದೆ.

ಇನ್ನು 'ಒಂದೂರು ಒಂದ್ಕತೆ' ಕಥೆಯಲ್ಲಿ ಜಾಗತೀಕರಣದ ಭರದಲ್ಲಿ ಸಂಸ್ಕೃತಿಯೊಂದರ ನಾಶ ಹೇಗೆ ನಡೆಯುತ್ತಿದೆ ಮತ್ತು ಸಮಾಜದ ವ್ಯವಸ್ಥೆ ತನಗರಿವಿಲ್ಲದೆ ಹೇಗೆ ಅರಾಜಕತೆಯ ಬೀಡಾಗುತ್ತಿದೆ ಎನ್ನುವುದರ ಚಿತ್ರಣವಿದೆ. ಪೌರುಷತ್ವಕ್ಕೆ ಹೆಣ್ಣಿನ ಮೇಲೆ ಎರಗಿ ಬೀಳುವುದೇ ಮೊದಲ ಕ್ರಿಯೆ ಎಂಬಂತೆ ಇಲ್ಲಿ ಚಿತ್ರಿತವಾಗಿದೆ.

ಈ ಕಥೆಯಲ್ಲಿ ತನ್ನ ಮನೋಗತವನ್ನು ಇನ್ನೊಬ್ಬರಿಗೆ ಮುಟ್ಟಿಸುವ ಸಂವಾದದ ಸಾಧ್ಯತೆಗಳು ಮುರಿದು ಬಿದ್ದ ಸ್ಥಿತಿಯನ್ನು ದಿಗ್ಭ್ರಮೆಯನ್ನು ಕಾಣಬಹುದು. ಸಂವಾದಕ್ಕಿಂತ ಮೌನವೇ, ಕಣ್ಣಿನ ನೋಟವೇ ವಿಷಾದದ ಸ್ಥಿತಿಯನ್ನು ವ್ಯಕ್ತಪಡಿಸುತ್ತದೆ.

ಹಟ್ಟೀಗೌಡರ ಮನೆಯ ಕೋಳೀಸಾರಿನ ಬಯಕೆ ಮಗಳ ನಿರಾಶೆಗೆ ತಾಯಿಯ ಅವಮಾನಕ್ಕೆ ಹೇಗೆ ಕಾರಣವಾಗಬಲ್ಲದೆಂಬುದನ್ನು ಸ್ವಾರಸ್ಯವಾಗಿ ವಿವರಿಸುವ ಕತೆ 'ಹುಚ್ಚೀರಿಯ ಎಸರಿನ ಪ್ರಸಂಗ', ಮಗಳ ಬಾಲಿಷ ಬದುಕಿನಿಂದ ಆರಂಭವಾಗುವ ಈ ಕತೆ ಕೋಳಿಸಾರಿನ ಪ್ರಸಂಗದ ಜೊತೆಗೆ ಗಂಡ ಬಿಟ್ಟ ಹೆಂಡತಿಯ ಜೀವನಗಾತೆಯನ್ನು, ಮಾರ್ಮಿಕವಾಗಿ ವಿವರಿಸುತ್ತದೆ. ಹುಚ್ಚೀರಿ ಬದುಕು ಸಾಗಿಸುವ ರೀತಿ ಮೇಲ್ನೋಟಕ್ಕೆ ಹುಚ್ಚುತನದಂತೆ ಕಂಡರೂ ಬದುಕನ್ನು ಬಯಸುವ, ಸಾಗಿಸುವ ಸ್ಥಿತಿಯನ್ನು ಮನಗಾಣಿಸುತ್ತವೆ. ಭಿಕ್ಷುಕಿಯಂತೆ ಕಾದು ನಿಂತು ಬೇಡಿ, ಬೈದರೂ ಬೈಸಿಕೊಂಡು ತಂದ ಕೋಳೀಸಾರು ಮಡಕೆ ಸಮೇತ ಸಲ್ಲಿದಾಗ ತನ್ನ ಛಿದ್ರ ಬದುಕನ್ನು, ಅಸಹಾಯಕತೆಯನ್ನೂ ಧ್ವನಿಸುತ್ತದೆ.



ಹೆಣ್ಣಿನ ಸೂಕ್ಷ್ಮ ಮನಸ್ಸಿನ ಜೊತೆ ಗಂಡಸರು ನಡೆದುಕೊಳ್ಳುವುದರ ಪರಿಣಾಮವನ್ನು ಕುರಿತ ಕಥೆ 'ಮಂಡೆ ಬಿಟ್ಟವರು'. ಒಂದು ಹೆಣ್ಣಿನ ಮಾನ ಕಳೆಯಬೇಕೆಂದೇ ಸೃಷ್ಟಿಗೊಂಡ ಗುಂಪೊಂದು ಪುಟ್ಲಕ್ಷ್ಮಿ ನೀರಿಗೆ ಹೋದಾಗ ಪಡ್ಡೆ ಹುಡುಗರು ಅವಳನ್ನು ಚುಡಾಯಿಸಲು ಒಬ್ಬ ವ್ಯಕ್ತಿಯನ್ನು ಪುಸಲಾಯಿಸಿ ಅವಳ ಹಿಂದೆ ಛೂಬಿಡುತ್ತಾರೆ. ಇದರಿಂದ ಪುಟ್ಲಕ್ಷ್ಮಿ ನಡತೆಯ ಬಗ್ಗೆ ಅಪಪ್ರಚಾರ ಹುಟ್ಟಿ ಆಕೆ ಅತ್ಯಂತ ಅವಮಾನಿತಳಾಗಿ ಇಡೀ ಕುಂಟುಂಬವೇ ದುಃಖದಲ್ಲಿ ಮುಳುಗುತ್ತದೆ. ಹೆಣ್ಣನ್ನು ತಮ್ಮ ಮೋಜಿಗಾಗೇ ಇರುವ ವಸ್ತು ಎಂದು ತಿಳಿದಾಗ ಇಂಥ ಅನೇಕ ಘಟನೆಗಳು ಸದ್ದಿಲ್ಲದೆ ನಡೆಯುತ್ತಲೇ ಇರುತ್ತವೆ ಎನ್ನಬಹುದು.

ಹಾಗೆಯೇ 'ಜಪದಕಟ್ಟೆ'ಯ ಶಂಕರಯ್ಯನ ಮಗಳು ಶಾರದೆಗೂ ಇಂಥದ್ದೇ ಸಂದರ್ಭ ಎದುರಾದಾಗ ಅವಳು ಯಾರಿಗೂ ಹೆದರದೆ ಅಡ್ಡಕಟ್ಟಿದ ಮಾದನನ್ನೇ ಮದುವೆಯಾಗುತ್ತಾಳೆ. ಆದರೆ ಇಲ್ಲಿ ಸಣ್ಣ ವ್ಯತ್ಯಾಸವೆಂದರೆ ಗೀತಾಳ ತಂದೆ ವ್ಯವಸ್ಥೆಯ ಪರವಾಗಿದ್ದರೆ, ಶಾರದಳ ತಂದೆ ಮಾದನ ಪರವಾಗಿ ನಿಂತರೂ ಸಹ ಮಾದ ನಂಬದೆ ಹೆಂಡತಿಯನ್ನು ಕರೆದುಕೊಂಡು ಹೋಗುತ್ತಾನೆ.

ಹೈಸ್ಕೂಲು ಓದುತ್ತಿದ್ದ ಶಾರದ ಸ್ಕೂಲಿಗೆ ಹೋಗಿ ಬರುತ್ತಿದ್ದ ಈಕೆಯನ್ನು ದಲಿತರ ಹುಡುಗ ಮಾದ ಛೇಡಿಸಿ ಅತ್ಯಾಚಾರವೆಸಗುತ್ತಾನೆ. ಆದರೆ ಶಾರದೆ ಅದನ್ನು ಹೇಳದೆ

ಮುಚ್ಚಿಟ್ಟಿರುತ್ತಾಳೆ. ಶಾರದೆ ಮುಚ್ಚಿಟ್ಟಿದ್ದ ಸತ್ಯವನ್ನು ಮಾದನೇ ಶತಶತಮಾನಗಳ ಆಳ್ವಿಕೆಯ ಇತಿಹಾಸವುಳ್ಳ ಜನಾಂಗವೊಂದನ್ನು ಗೆದ್ದ ಸಂಭ್ರಮದಿಂದ ಹೇಳಿಕೊಳ್ಳುತ್ತಾನೆ. ನಂತರ ಶಾರದೆಯನ್ನು ನಾನೇ ಮದುವೆಯಾಗುತ್ತೇನೆಂದು ಹೇಳಿದಾಗ ಶಂಕರಯ್ಯನೂ ಒಪ್ಪುತ್ತಾನೆ. ಆದರೆ ಮಾದನಿಗೆ ವಿಶ್ವಾಸ ಬರುವುದಿಲ್ಲ.

"ನಿಮ್ಮನ್ನು ನಂಬಕ್ಕಾಗಲ್ಲ. ನಿಮ್ಮ ಚರಿತ್ರೆಯ ಒಮ್ಮೆಗೇ ಮೊಗಚಿ ಹಾಕೋದು ಅಷ್ಟು ಸುಲಭವಲ್ಲ. ಭಾರಿ ಹುನ್ನಾರಿನ ಜನ"[೧೭]

ಎನ್ನುವಲ್ಲಿ ಮೇಲ್ವರ್ಗದ ಜನ ಮಗಳ ಬಾಳನ್ನೂ ಲೆಕ್ಕಿಸದೆ ಪ್ರತಿಷ್ಠೆ ಮೆರೆಯುತ್ತಾರೆಂಬುದರ ಒಳಾರ್ಥವೇ ಆಗಿದೆ.

ಶಾರದೆ ತಾನೂ ಮಾದನನ್ನೇ ಮದುವೆಯಾಗಿ ತನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸಿದರೆ ಗೀತಾಳು ಸಹ ಹಾಗೆ ಚಲುವಾದಿಯನ್ನೇ ಮದುವೆಯಾಗುವುದಾಗಿ ನಿರ್ಧರಿಸುತ್ತಾಳೆ. ಆ ನಿರ್ಧಾರದ ಸಂದರ್ಭ ಬಹಳ ಸ್ವಾರಸ್ಯವಾಗಿದೆ ಮತ್ತು ಸಮಾಜಕ್ಕೊಂದು ಚಿಕಿತ್ಸಾ ದೃಷ್ಟಿಯನ್ನು ಬೀರುತ್ತದೆ.

"ಇವರು ಧರ್ಮದ ಹೆಸರಿನಲ್ಲಿ ಬೆಳೆಸಿಕೊಂಡಿರುವ ತಮ್ಮ ಪ್ರತಿಷ್ಠೆಗೆ ಜೀವ ತುಂಬಲು ಮಾತ್ರ ತನ್ನ ಬೇಡುತ್ತಿದ್ದಾರೆ; ಈ ನೊಂದ ಜೀವದ ತಂಪಿಗಾಗಿ ಅಲ್ಲ. ಒಂದಿಲ್ಲ ಒಂದು ರೀತಿಯಲ್ಲಿ ಹೊನ್ನ ಮತ್ತವರಿಂದ ಅವಮಾನಗೊಂಡಿರುವ ಇವರು ಅವರಿಗೆ ಯಮಕಂಟಕರಾಗಬೇಕಾಗಿರುವುದೇ ಹೊರತು ತನ್ನ ಬದುಕಿನ ಆಸೆ ಪ್ರೀತಿ ನೋವು ನಲಿವು ಆಂದೋಲನ ಸೂಕ್ಷ್ಮಗಳಿಗೆ ಮನುಷ್ಯರಾಗಬೇಕಾಗುವುದಲ್ಲ. ಇರೋತನಕ ಹಿಟ್ಟು ಬಟ್ಟೆ ಕೊಟ್ಟರೆ ಆಯಿತಲ್ಲ ಎಂಬುದು ಇವರ ಹುಂಬತನದ ನಿರ್ಧಾರ. ಅಪ್ಪನೂ ಇದಕ್ಕೆ ಮನಸ್ಸೊಗ್ಗಿಸಿಕೊಳ್ಳುತ್ತಿರಬೇಕು.....

ಇಲ್ಲ; ತಾನಿದಕ್ಕೆ ತಲೆ ಕೊಡಲಾರೆ. ಕಂಡಿತ ತಲೆ ಒಡ್ಡಲಾರೆ. ತನ್ನ ಬದುಕಿನ ನಿರ್ಧಾರ ತನ್ನಿಂದಲೇ ಆಗಬೇಕು. ಅದೂ ಈಗುಳಿದಿರುವ ಒಂದೇ ದಾರಿಯಿಂದ. ಚಲುವಾದಿ ಕರೆಸಿ ಅವನನ್ನು ಎದುರು ನಿಲ್ಲಿಸಿಕೊಂಡು ಒಂದು ಕಾಲಕ್ಕೆ ಇವನ ನಾನು ಇಷ್ಟಪಟ್ಟಿದ್ದು ನಿಜ. ಇವನೂ ಕೂಡ ಆ ಆಸೆಯಿಂದಲೇ ಬಂದು ನನ್ನ ತೋಳ ಹಿಡಿದುಕೊಂಡಿದ್ದು. ಅಷ್ಟಕ್ಕೆ ಹೆದರಿ ಚೀರಿಕೊಂಡೆ.

ನಡೆದಿದ್ದು ಇಷ್ಟು ಬಿಟ್ಟರೆ ಇವರು ಹೇಳುವ ಹಾಗೆ ಬೇರೇನೂ ನಡೆದಿಲ್ಲ. ಅಷ್ಟರಿಂದ ಇಷ್ಟೆಲ್ಲ ಆಗಿ ಹೋಗಿದೆ. ನಾನು ಜಾತಿಗೆ ಕುಲಕ್ಕೆ ದೇವರಿಗೆ ಯಾವುದಕ್ಕೂ ಇಲ್ಲವಾಗಿದ್ದೇನೆ. ಈಗ ಉಳಿದಿರುವುದೆಂದರೆ ಚಲುವಾದಿ ಒಟ್ಟಿಗೆ ನನ್ನ ಕಳಿಸುವುದು. ಆದ್ದರಿಂದ ದಯವಿಟ್ಟು ಮುರಿದು ಬಿದ್ದಿರೋ ಈ ಬಾಳಿಗೆ ಆ ಚಲುವಾದಿಯನ್ನೇ ಅಸರೆ ಮಾಡಿಬಿಡಿ ಇನ್ಸೆಕ್ಟರೇ, ಆಗದಿದ್ದರೆ ಸಾಯುವುದಕ್ಕಾದರೂ ಬಿಟ್ಟುಬಿಡಿ ನಿಶ್ಚಿಂತೆಯಿಂದ ಸಾಯುತ್ತೇನೆ. ಆದರೆ ಬದುಕಲೂ ಆಗದ ಸಾಯಲೂ ಬಿಡದ ಕೂಪಕ್ಕೆ ತಳ್ಳಿ ಈ ವಡ್ಡರ ಮಧ್ಯೆ ದಿನ ಎಣಿಸುವ ಹಾಗೆ ಮಾಡಬೇಡಿ ಸ್ವಾಮಿ....."[೧೯]

ಈ ನಿರ್ಧಾರ ಅವಳ ಬದುಕನ್ನು ನಿರ್ಧರಿಸುವಂತಹದ್ದು ಇಂತಹ ಹೆಣ್ಣು ಮಕ್ಕಳಿಗೆ ಸಾಮಾಜಿಕ ಮೌಲ್ಯ ನೀಡುವಂತಹದ್ದು ಎನ್ನಬಹುದು.

ಕುವೆಂಪು ಮತ್ತು ಬೇಂದ್ರೆಯವರಲ್ಲಿರುವಂತೆ ಚಿಕ್ಕಣ್ಣನವರಲ್ಲಿಯೂ ಸಹ ಸಮುದಾಯ ಮತ್ತು ವ್ಯಕ್ತಿ ಇವುಗಳ ಸಂಘರ್ಷದ ಬಿತ್ತಿ ಇದೆ. ಕುವೆಂಪುರವರ ಇಂತಹ ಬಿತ್ತಿಯನ್ನು ಕಾದಂಬರಿಯಂತಹ ದೊಡ್ಡ ಕ್ಯಾನ್‌ವಾಸ್‌ನಲ್ಲಿ ಬಳಸಿದರೆ, ಬೇಂದ್ರೆಯವರು ಭಾವಗೀತೆಯಂತಹ ಚಿಕ್ಕ ಕ್ಯಾನ್‌ವಾಸ್‌ನಲ್ಲಿ ಬಳಸಿದ್ದಾರೆ. ಚಿಕ್ಕಣ್ಣನವರು ಕಾದಂಬರಿಯಂತಹ ದೊಡ್ಡ ಕ್ಯಾನ್‌ವಾಸ್ ಮತ್ತು ಕಥೆಗಳಂತಹ ಚಿಕ್ಕ ಕ್ಯಾನ್‌ವಾಸ್ ಎರಡನ್ನೂ ಬಳಸಿ, ಸಂಘರ್ಷದ ನೀತಿಯನ್ನು ಚಿತ್ರಿಸಿದ್ದಾರೆ.

'ಹಮೀದಾಯಣ' ಕಥೆಯನ್ನು ವಿಶ್ಲೇಷಿಸುವುದಾದರೆ ಈ ಕಥೆಯಲ್ಲಿ ಒಂದು ರೀತಿಯ ಸಾಮಾಜಿಕ ಚಲನೆಯನ್ನು ಗುರ್ತಿಸಬಹುದು. ಅಂದರೆ ಮುಚ್ಚಿದ ವ್ಯವಸ್ಥೆಯಿಂದ ಮುಕ್ತ ವ್ಯವಸ್ಥೆಯತ್ತ ನಡೆಯುವುದು. ಜಾತಿ, ಧರ್ಮದ ಕಟ್ಟಳೆಗಳಿಂದ ತಮ್ಮ ಸುತ್ತಲೇ ಒಂದು ಚೌಕಟ್ಟನ್ನು ಸೃಷ್ಟಿಸಿಕೊಂಡು ಅದರಾಚೆಗಿನ ಪ್ರಪಂಚದ ಸೊಗಸನ್ನು ಗುರ್ತಿಸಲೂ ಅಸಮರ್ಥವಾದ ಸ್ಥಿತಿಗೆ ಮನುಷ್ಯ ಬಂದು ತಲುಪಿದ್ದಾನೆ. ತಾನೇ ನಿರ್ಮಿಸಿಕೊಂಡ ಚೌಕಟ್ಟು ತನಗೇ ಮುಳುವಾಗುವ ಸಂದರ್ಭದಲ್ಲಿ ಜ್ಞಾನೋದಯವಾದರೂ ಸಹ ಪ್ರಯೋಜನವಿಲ್ಲದಂತಾಗಬಹುದು. ಹಾಗಾಗಿ ಸಾಂಸ್ಕೃತಿಕ ಚಲನೆ ಎನ್ನುವುದು ಮುಕ್ತವಾದಾಗ ಅದೊಂದು ಸಾಮಾಜಿಕ ಮೌಲ್ಯತ್ವವನ್ನು ಪಡೆಯುತ್ತದೆ. ಅಂತಹ ಪಾತ್ರಗಳು ಹಮೀದ ದಂಪತಿಗಳು.

ಅನ್ಯಧರ್ಮೀಯರಾದ ಇವರೀರ್ವರು ವಿವಾಹವಾಗಿ, ಬಾಳುವೆ ಮಾಡುವ ಸಲುವಾಗಿ ಹಳ್ಳಿಯಿಂದ ನಗರಕ್ಕೆ ಹೋಗಿ ಅಲ್ಲಿನ ಸ್ಥಿತಿಯನ್ನೂ ಅರಿತು ಮತ್ತೆ ಹಳ್ಳಿಗೆ ವಾಪಸ್ಸಾಗುವುದರ ಮುಖೇನ ಪ್ರಾದೇಶಿಕತೆಯನ್ನು ಮೆರೆದಿರುವುದನ್ನು ಕಾಣಬಹುದು. ಇಲ್ಲಿನ ಸಾಮಾಜಿಕ ಚಲನೆಗೂ, ಸ್ತ್ರೀವಾದಿ ನೆಲೆಗಳ ಅಧ್ಯಯನಕ್ಕೂ, ಗಂಡು ಹೆಣ್ಣಿನ ಸಂಬಂಧಗಳ ಸ್ವರೂಪಕ್ಕೂ ಪರಸ್ಪರ ಸಂಬಂಧವಿದೆ.

ಹಮೀದ ಅಂತರ್‌ಧರ್ಮ ವಿವಾಹವನ್ನು ಮಾಡಿಕೊಂಡವನು. ಇಂತಹ ಅಂತರ್‌ಧರ್ಮ ವಿವಾಹಗಳು ನಡೆದಾಗ ಮತನಿಷ್ಠ ಸಾಮಾಜಿಕ ವ್ಯವಸ್ಥೆಯಲ್ಲಿ ವಿರೋಧ ವ್ಯಕ್ತವಾಗುವುದು ಸಹಜ. ಇಂತಹ ವಿರೋಧದ ನಡುವೆಯೂ ಮದುವೆಯಾಗುತ್ತಾರೆ. ಇಲ್ಲಿ ಹಮೀದನ ಹೆಂಡತಿ 'ಜಪದಕಟ್ಟೆ'ಯ ಶಾರದೆಗಿಂತ, 'ನಿಚ್ಚಯ'ದ ಗೀತಾಳಿಗಿಂತ ಪಕ್ವವಾದ ಪ್ರಬುದ್ಧ ಪಾತ್ರ ಎನ್ನಬಹುದು. ಹಾಗೆ ಮದುವೆಯಾಗಿಯೂ ಪರಿಪೂರ್ಣ ಬದುಕನ್ನು ಸಾಗಿಸುತ್ತಿರುವುದನ್ನು ಮತ್ತು ಬದುಕನ್ನು ಚೈತನ್ಯಗೊಳಿಸುವ ನೆಲೆಯನ್ನು ಆಯ್ಕೆಮಾಡಿಕೊಳ್ಳುವುದರ ಜಾಣ್ಮೆಯನ್ನು ಗಮನಿಸಬಹುದು. ಇದನ್ನು ಹಮೀನ ಮಾತುಗಳಲ್ಲಿಯೇ ಕೇಳಬಹುದು.

> "ನಾವು ಲಗ್ನ ಆಯ್ತೀವಿ ಅಂತ ಹೊರಟಾಗ ಜಾತಿಕುಲ ಕೆಟ್ಟೋಯ್ತು ಅಂತ ಬಾಳ ಗದ್ಲ ಆಗೋಯ್ತು. ಊರ್‍ನೋರು ನಮ್ಮಪ್ಪ–ಅವ್ವರಿಗೆಲ್ಲ ಪೀಡಿಸಿದ್ರು; ಹಿಂಸೆಕೊಟ್ರು, ನಂಗೆ ಹಿಡ್ಕೊಂಡು ಹೊಡೆದ್ರು. ಸಾಯ್ಸೇಬುಡ್ತೀವಿ ಅಂತ ಹೇಳಿದ್ರು. ಇದುನೆಲ್ಲ ನೋಡಿದ ನಮ್ಮವ್ವ ಒತ್ತಾಯ ಮಾಡಿ ಎಲ್ಲಾರ ಹೋಗಿ ಬದುಕೋಳಿ ಅಂತ ಹಟ ಹಿಡಿದ್ಬುಟ್ಟಳು. ಆಗ ಇತ್ಲಾಗಿ ಬಂದ್‌ಬುಟ್ವೋ, ಇತ್ತೀಚ್ಗೆ ನಮ್ಮಪ್ಪನೂ ತೀರ್ಕೊಂಡುಬುಟ್ಟನಂತೆ. ನಂಗೆ ಗೊತ್ತಾಗನಿಲ್ಲ. ನಮ್ಮವ್ವ ನಾವಿಲ್ಲಿರೋದ ಹೇಂಗೋ ತಿಳಿದು ಹೇಳಿಕಳ್‌ಸವಳೆ. ಅದು ಏನೇ ಆದ್ರೂ ನಮ್ಮೂರಲ್ವಾ? ನಮ್ದೊಂದು ನೆರಳ್ ಮಾಡಿಕೊಂಡು ಅಲ್ಲಿ ಬದುಕ್ತೀವಿ ಬುಡಿ ಸಹೇಬ್ರಾ".[೨೦]

ಹಮೀದನ ಈ ಮಾತುಗಳು ಮತೀಯ ಜಡ್ಡುಗಳಿಂದ ಕೂಡಿದ ಸಾಮಾಜಿಕ ವ್ಯವಸ್ಥೆಗೆ ಒಡ್ಡಿದ ಪ್ರತಿರೋಧವಾದಿದೆ. ಹಾಗೆಯೇ ಮುಚ್ಚಿದ ವ್ಯವಸ್ಥೆಯಿಂದ ಮುಕ್ತ ಸ್ತರ ವ್ಯವಸ್ಥೆಗೆ ಚಲಿಸುವ ಸಾಮಾಜಿಕ ವ್ಯವಸ್ಥೆಯಲ್ಲಿನ ಮನುಷ್ಯ ಸಂಬಂಧಗಳ ಸ್ವರೂಪವನ್ನು ವ್ಯಕ್ತಪಡಿಸುವಂತಹದ್ದಾಗಿದೆ. 'ವಶಂಸ್ಥರು', 'ಹಮೀದಾಯಣ', 'ಒಡಲುರಿ', 'ನಿಚ್ಚಯ', 'ಜಪದಕಟ್ಟೆ', 'ಕವಳ', 'ಕರಗವ್ವ' ಈ ಎಲ್ಲಾ ಕಥೆಗಳಲ್ಲಿ ಪರಂಪರಾಗತ ಶ್ರದ್ಧೆ, ನಂಬಿಕೆಗಳನ್ನೂ ಪ್ರಶ್ನಿಸುವಂಥ ಸನ್ನಿವೇಶ ಸಂದರ್ಭಗಳು

ಎದುರಾದಾಗಲೂ ಆ ಸಂಪ್ರದಾಯಿಕ ಮೌಲ್ಯಗಳ ಚೌಕಟ್ಟಿನಲ್ಲಿಯೇ ಅದಕ್ಕೆ ಪರಿಹಾರವನ್ನು ಹುಡುಕುವ, ಪರಿಹಾರವನ್ನು ಸೂಚಿಸುವ ಧೋರಣೆ ಮತ್ತು ಆತ್ಮವಿಶ್ವಾಸವನ್ನೂ ಕಾಣಬಹುದು.

ಒಟ್ಟಾರೆ 'ಜಪದಕಟ್ಟೆ'ಯ ರುಕ್ಮಿಣಿ, ಶಾರದೆ, 'ನಿಚ್ಚಯ'ದ ಗೀತ, 'ಒಡಲುರಿ'ಯ ಸಣ್ಣಿಂಗಿ, 'ವಶಂಸ್ಥರು' ಕಥೆಯ ಈರವ್ವ, 'ಹಸಿರು ಹರಳಿನುಂಗುರ' ಕಥೆಯ ಲಕ್ಷ್ಮಿ, 'ತೆರೆ ತೆರೆ ಸರಿದಂತೆ' ಕಥೆಯ ಮಾದಿ, 'ಕರಗವ್ವ' ಕಥೆಯ ಕರಗವ್ವ, 'ಸತ್ಯವತಿ' ಕಥೆಯ ಸತ್ಯವತಿ, 'ಹುಚ್ಚೀರಿಯ ಎಸರಿನ ಪ್ರಸಂಗ'ದ ಹುಚ್ಚೀರಿ, ವಾಸನಾಮಯ ಬದುಕಿನ ಆಚೆ ಈಚೆ ಕಥೆಯ ಸ್ತ್ರೀಗಳು, 'ಗಂಟಾದ ನಂಟು' ಕಥೆಯ ಹೆಂಗಸು ಎಲ್ಲ ಪಾತ್ರಗಳು ಪುರುಷ ಪ್ರಧಾನ ವ್ಯವಸ್ಥೆಯ ತುಳಿತಕ್ಕೆ ಒಳಗಾದವರೇ. ಅದರ ಬೆಂಕಿಯ ಉರಿಯಲ್ಲಿ ಬೆಂದು ಬದುಕು ಕಟ್ಟಿದವರೇ. ದೇವರಲ್ಲಿ ಬಹಿರಂಗವಾಗಿ ಬಂಡಾಯದ ನೆಲೆಯನ್ನು ಗುರ್ತಿಸಬಹುದು, ಇನ್ನು ಕೆಲವರಲ್ಲಿ ಮೌನ ಪ್ರತಿಭಟನೆಯನ್ನು ಗುರ್ತಿಸಬಹುದು. ಮತ್ತೂ ಕೆಲವರು ಅದನ್ನು ಒಪ್ಪಿಯೂ ಬದುಕನ್ನು ಸಾಗಿಸುವುದನ್ನು ಕಾಣಬಹುದು.

ಅದನ್ನೇ ಹೀಗೆ ಹೇಳಬಹುದು. ಅದೇನೆಂದರೆ ಶೊಷಣೆಯ ವ್ಯವಸ್ಥೆಯಲ್ಲಿ ಬೆಂದು ಹೋದ ಪಾತ್ರಗಳು ಒಂದು ಕಡೆ ನಮ್ಮ ಕಣ್ಎದುರಿಗಿದ್ದರೆ, ಇನ್ನೊಂದೆಡೆ ಅದನ್ನು ದಾಟುವ ಪಾತ್ರಗಳೂ ಇವೆ. ಇವೆರಡರಲ್ಲಿ ಯಾವುದೂ ವಾಸ್ತವದಲ್ಲಿ ಸ್ವೀಕೃತವಾಗುತ್ತದೆ? ಕಥೆಗಾರ ಆದವನಿಗೆ ಇದು ಇಕ್ಕಟ್ಟಿನ ಪರಿಸ್ಥಿತಿ. ಗೀತಾ ಆಗಲಿ, ಸಣ್ಣಿಂಗಿ ಆಗಲಿ, ಸ್ವತಂತ್ರ ಪಾತ್ರಗಳಾಗಿ ಕೊನೆಯಲ್ಲಿ ವ್ಯವಸ್ಥಯನ್ನು ಧಿಕ್ಕರಿಸಿ ನಿಲುವಾಗ ಅವರಲ್ಲಿ ಮೂಲತಃ ಇಲ್ಲದ ಆದರ್ಶವನ್ನು ಕಥೆಗಾರನು ಕಾಣಿಸಿದ್ದೇ? ಅಥವಾ ಅದು ಆಗಲೇ ಬೇಕಾದ ಸಾಮಾಜಿಕ ನ್ಯಾಯವೇ? ಅಥವಾ ಅದೂ ಸಹ ಕಥೆಗಾರನ ಆಶಯವೆ. ಈ ಎಲ್ಲಾ ಪ್ರಶ್ನೆಗಳಿ ಚಿಕ್ಕಣ್ಣನವರ ಕಥೆಗಳು ಅಭಿಮುಖವಾಗಿ ನಿಲ್ಲುತ್ತವೆ.

ಜೀವದ ಹುಟ್ಟಿಗೆ, ಶಕ್ತಿಯ ಸೃಷ್ಟಿಗೆ ಕಾರಣವನ್ನು ಒಪ್ಪಿಕೊಂಡರೆ ಪುರುಷ ವ್ಯವಸ್ಥೆ ತನ್ನ ಅಟ್ಟಹಾಸವನ್ನು ನಿಲ್ಲಿಸಬಹುದು.

ಗಂಡು ಆಳಬೇಕು
ಗಂಡು ಆಳಿಸಿಕೊಳ್ಳಬೇಕು
ನಗುವಿನೊಂದಿಗೆ ಬೆರಿಬೇಕು
ದುಃಖದೊಂದಿಗೆ ಕರಗಬೇಕು

ಸಿಟ್ಟುಬಂದಾಗ ಸಿಡೀಬೇಕು
ಮುನಿಸಿಕೊಂಡಾಗ ಮುದ್ದಿಸಬೇಕು
ಕನಸಿನಾಗೆ ಕಾಡಬೇಕು
ಹಾಸಿಗೆಯಲ್ಲಿ ಮದನನ ಮೀರಿಸಬೇಕು
ಆದರ್ಶದ ಬಲೇಲಿ
ಅಂಜಿಕೆಯ ಗೂಡಲ್ಲಿ
ಅಹಂಕಾರದ ಬಿಗೀಲಿ
ಪೌರುಷದ ಮೀಸೆ ಮರೆಯಲಿ
ಭೂ ತಾಯ ಬೀಜಗಳು
ಮೊಗ್ಗು ಕಚ್ಚಿ
ಹುವ್ವರಳಿ
ಹೀಚಾಗಿ
ಕಾಯಿ ಬಲಿತು
ಹಣ್ಣಾಗಿ ತನ್ನೋರಿಗೆ ಫಲವಾಗಬೇಕು.
ಆ ಫಲ ಕೊಟ್ಟೋಳು
ಹೆಣ್ಣು ...!!

ಹೀಗೆ ಕಾ.ತ.ಚಿಕ್ಕಣ್ಣನವರು ತಮ್ಮ ಸಮಗ್ರ ಕತೆಗಳ ಮೂಲಕ ಹಳ್ಳಿಗಾಡಿನ ಗ್ರಾಮ ಸಮಾಜದ ಜಡತ್ವ ಮತ್ತು ಚಲನಶೀಲತೆಗಳ ಪರಿವರ್ತನೆಯಲ್ಲಿ ಸಮಾಜ ಮತ್ತು ವ್ಯಕ್ತಿ ಎರಡರ ಒಳಹೊರಗನ್ನು ಸೂಕ್ಷ್ಮವಾಗಿ ಬಿಡಿಸಿ ತೋರಿಸುವ ರೀತಿ ಅನನ್ಯವಾದದ್ದು. ಹಳ್ಳಿಯ ಆಳದಲ್ಲಿ ಹುದುಗಿರುವ ಸ್ವಾರ್ಥ, ಸಿನಿಕತೆ, ಕ್ರೌರ್ಯ, ಹಿಂಸೆಯ ಮನುಷ್ಯ ಸ್ವಭಾವಗಳನ್ನು ದಿನನಿತ್ಯದ, ವರ್ಗ-ವರ್ಣ, ಸಮಾಜದ ಸಂಗತಿಗಳೊಂದಿಗೆ ತುಂಬಾ ತಣ್ಣನೆಯ ನೋವಿನಂತೆ ಕಥೆಗಳ ಮೂಲಕ ಹೊರಹಾಕುತ್ತಾರೆ. ಎಲ್ಲೂ ಆರ್ಭಟಿಸದೆ ಅಂತರಂಗದ ಪರಿವರ್ತನೆಯ ಮೂಲಕ ಹೊಸ ಬದುಕಿನ ಕಡೆ ಮುಖ ಮಾಡುವ ವಿಧಾನ ಗ್ರಾಮ ಬದುಕಿನ ಒಡಲಾಳದ ಕಾಳಜಿ ಮತ್ತು ಅಂತಃಕರುಣೆಯ ಆತ್ಮೀಯ ನಿರೂಪಣೆಗಳಾಗಿವೆ.

## ಅಡಿ ಟಿಪ್ಪಣಿ-೩

೧. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೧೯

೨. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೩೩೦

೩. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೩೩೦

೪. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೪೪

೫. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೮೬

೬. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೮೬

೭. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೭೦

೮. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೭೧

೯. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೮೬

೧೦. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೨೫೨

೧೧. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೨೫೨

೧೨. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೩೪೦

೧೩. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೩೪೦

೧೪. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೨೭೧

೧೫. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೨೭೪

೧೬. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೨೭೫

೧೭. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೧೮೩

೧೮. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೨೩೩

೧೯. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೧೨

೨೦. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೨೭೫

೨೧. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೧೦೮

# ಅಧ್ಯಾಯ-೪

## ಸಂಜೆ ಪಯಣದ ಮಿಣಗು ದೀಪಗಳು

ಭಾರತದ ಸಂಸ್ಕೃತಿ ಮೂಲದಲ್ಲಿ ಮಾತೃಪ್ರಧಾನ ಸಂಸ್ಕೃತಿ. ವೇದಗಳ ಕಾಲದಲ್ಲಿ ಸ್ತ್ರೀಗೆ ಪುರುಷನಷ್ಟೇ ಸರಿಸಮಾನ ಸ್ಥಾನಮಾನಗಳಿದ್ದವು. ಪುರುಷನಿಗಿಂತ ಸ್ತ್ರೀಶಕ್ತಿಯನ್ನೇ ಮೆರೆವ ಬದ್ಧ ಹಿತಾಸಕ್ತಿಗಳು ಸ್ತ್ರೀಯ ಮೇಲ್ಮೆಯನ್ನು ಹತ್ತಿಕ್ಕುವ ವ್ಯವಸ್ಥಿತ ಪಿತೂರಿಯಿಂದ ಇಂದು ಸ್ತ್ರೀ ಎರಡನೇ ದರ್ಜೆಯಲ್ಲಿ ಗುರುತಿಸಲ್ಪಡುತ್ತಾಳೆ. ಹಾಗಿದ್ದಾಗ್ಯೂ ಈ ಪುರುಷ ಪ್ರಧಾನ ವ್ಯವಸ್ಥೆಯಲ್ಲಿಯೂ ಮಾತೃಸ್ಥಾನಕ್ಕೆ ಅಷ್ಟೇ ವೈಶಿಷ್ಟ್ಯತೆ, ಮನ್ನಣೆ ಇದೆ. ಮಾತೃಭಾಷೆ, ಮಾತೃಭೂಮಿ, ಮಾತೃ ಹೃದಯ ಮುಂತಾದಂತಹ ಪದಗಳು ನಮ್ಮ ಮನಸ್ಸನ್ನು ಪುಲಕಿತಗೊಳಿಸಿ ಒಂದು ಭದ್ರತೆಯ ಅನುಭವವನ್ನು ಮೂಡಿಸುತ್ತವೆ.

ಇಂದು ಮನುಷ್ಯ ಎಷ್ಟೇ ನಾಗಾಲೋಟದಲ್ಲಿ ಅಭಿವೃದ್ಧಿ, ಪ್ರಗತಿ ಎಂಬುದರ ಬೆನ್ನು ಹತ್ತಿ ಓಡುತ್ತಿದ್ದರೂ ಸಹ ಮಾತೃ ಮೂಲದ ಸಂಸ್ಕೃತಿಯೆ ಇಂದಿಗೂ ಬದುಕನ್ನು ಕಟ್ಟುವ ಕಾರ್ಯದಲ್ಲಿ ಕ್ರಿಯಾಶೀಲವಾಗಿರುವಂತದ್ದು. ಆದರೆ ಈ ಒಳ ಸೆಲೆಯ ಚಲನಶೀಲತೆ ಜಗತ್ತಿನ ಕಣ್ಣಿಗೆ ಕಾಣಿಸದು. ಆದರೂ ಜೀವಿಯ ಉಳಿವಿಗೆ ಅಗೋಚರವಾಗಿ ಸೇವೆ ಸಲ್ಲಿಸುತ್ತಿದೆ ಎನ್ನಬಹುದು. ಇಂತಹ ಮಾತೃ ಸೆಲೆಯ ಸೆಳೆತಕ್ಕೆ ಒಳಗಾದ ಚಿಕ್ಕಣ್ಣನವರ ಬಹುಪಾಲು ಕಥೆಗಳು ಬಡ ತಾಯಂದಿರನ್ನು, ಅದರಲ್ಲೂ ವೃದ್ಧ ತಾಯಂದಿರನ್ನು ಕುರಿತದ್ದೇ ಆಗಿದೆ.

ಪ್ರೀತಿ, ಮಮತೆ, ಪೋಷಕಗುಣ, ಜೀವನ್ಮುಖತೆಗಳು ಪ್ರಧಾನ ಗುಣಗಳಾಗಿ ಕಾಣುವ ತಾಯಂದಿರ, ಅದರಲ್ಲೂ ವೃದ್ಧ ತಾಯಂದಿರ ಪಾತ್ರ ಚಿಕ್ಕಣ್ಣನವರ ಕಥೆಗಳಲ್ಲಿ ಬಹಳವಾಗಿ ಗಮನ ಸೆಳೆಯುತ್ತವೆ. 'ಅವಲಂಬನೆ' ಕಥೆಯ ಮುದುಕಿ, 'ಮುಂಗಾರು ಮಳೆಯ ಸಂಜೆ' ಕಥೆಯ ತಾಯವ್ವ, 'ಹಮೀದಾಯಣ' ಕಥೆಯ ಹಮೀದನ ತಾಯಿ, 'ಬೆಳ್ಳಕ್ಕಿ ಸಾಲು' ಕಥೆಯ ಸಾಕವ್ವ, 'ವಂಶಸ್ಥರು' ಕಥೆಯ ಈರವ್ವ, 'ನೆರೆ' ಕಥೆಯ ಪುಟ್ಟಬಸವನ ತಾಯಿ, 'ಕರಗವ್ವ' ಕಥೆಯ ಕರಗವ್ವ, 'ನಿಚಯ' ಕಥೆಯ ಗೀತಾಳ ತಾಯಿ-ಈ ಪಾತ್ರಗಳು ಎಷ್ಟೇ ಕಷ್ಟದ ಪರಿಸ್ಥಿತಿಯನ್ನು ಎದುರಿಸುತ್ತಿದ್ದರೂ ಆ ನಡುವೆಯೂ ತಮ್ಮ ಮಕ್ಕಳ, ಮೊಮ್ಮಕ್ಕಳ ಏಳಿಗೆಯನ್ನು ಬಯಸಿ ಅದಕ್ಕಾಗಿ ತನ್ನ ಆಯಸ್ಸನ್ನು ಗಟ್ಟಿಹಿಡಿದು ಜೀವನ ಸಾಗಿಸುವ ಪರಿ, ಜೀವನ ಸಾಗಿಸಲು ಹೋರಾಡುವ ರೀತಿ ಎಲ್ಲವೂ ಚಿಕ್ಕಣ್ಣನವರ ಕಥೆಗಳಲ್ಲಿ ಮನ ಮುಟ್ಟುವಂತೆ ಚಿತ್ರಿತವಾಗಿದೆ.

ಮೊದಲಿಗೆ 'ಬೆಳ್ಳಕ್ಕಿ ಸಾಲು' ಕಥೆಯ ಸಾಕವ್ವನ ಬಗ್ಗೆ ವಿವೇಚಿಸೋಣ. ಈ ಕಥೆಯ ಮುಖ್ಯ ಪಾತ್ರಧಾರಿ ಮಾಲಿಂಗು ತಂದೆತಾಯಿ ಇಲ್ಲದ ತಬ್ಬಲಿ. ಬಾಲ್ಯದ ಗೆಳತಿ ಮಾದೇವಿ ಮನೆಯಲ್ಲೇ ಬೆಳೆಯುತ್ತಿರುತ್ತಾನಾದ್ದರಿಂದ ದೊಡ್ಡವನಾದ ಮೇಲೆ ಮಾದೇವಿಯನ್ನೇ ಉಸಿರೆಂದು ತಿಳಿದು ಪ್ರೀತಿಸುತ್ತಿರುತ್ತಾನೆ. ಆದರೆ ತಂದೆತಾಯಿ, ಆಸ್ತಿ–ಪಾಸ್ತಿ ಏನೂ ಇಲ್ಲದ ಮಾಲಿಂಗುಗೆ ಮಗಳನ್ನು ಕೊಡುವುದಿಲ್ಲವೆಂದು ನಿರ್ಧರಿಸಿ ಮಾದೇವಿಯನ್ನು ಇವನಿಂದ ದೂರ ಮಾಡುತ್ತಾರೆ. ಇದರಿಂದ ಹುಚ್ಚನಂತಾಗಿ ಊರನ್ನೇ ಬಿಟ್ಟು ಅಲೆಯುತ್ತಿದ್ದ ಅವನಿಗೆ ತಮಟೆ ಬಾರಿಸುವ, ಬಾರಿಸುತ್ತಾ ಕುಣಿವ ಕಲೆಗಾರಿಕೆ ಇತ್ತು. ಇದರಿಂದ ಊರು ಬಿಟ್ಟು ಊರೂರು ಅಲೆಯುತ್ತ ಇವನು ಒಮ್ಮೆ ಸಾಕವ್ವನಿರುವ ಊರಿಗೆ ಬಂದು, ತಮಟೆ ಬಡಿದು, ಕುಣಿತ ಕುಣಿದು ಎಲ್ಲರ ಮೆಚ್ಚುಗೆಗೂ ಪಾತ್ರನಾದ. ಆದರೆ ಪೂಜಾರಿ ಮನೆ ಕೆಲಸ, ದೇವಾಲಯದ ಕೆಲಸ ಎಲ್ಲವನ್ನೂ ಮಾಡಿದ್ದಾಗ್ಯೂ ಹೊಟ್ಟೆಗೆ ಊಟವನ್ನು ಕೊಡದೆ ಇದ್ದದ್ದರಿಂದ ಮತ್ತು ತಮಟೆ ಕುಣಿತವನ್ನು ಮೆಚ್ಚುತ್ತಿದ್ದ ಮಾದೇವಿ ಜೊತೆಯಲ್ಲಿಲ್ಲದ ನೋವಿನಿಂದ ನಡೆಯುತ್ತಿದ್ದಾಗ ಸಾಕವ್ವ ಎದುರಾಗಿ ಇವನ ಕುಣಿತವನ್ನು ಮೆಚ್ಚಿ "ಅದ್ಯಾಕೆ ಮೊಗಾ? ರಾತ್ರಿ ಆಪಾಟಿ ಕುಣ್ದೆ, ಈಗ ಮಾತೇ ಆಡೊಲ್ಲೆ, ನಾಚ್ಗ್ಯಾಕೆ? ನಮ್ಮನ್ನೂ ನಿಮ್ಮೌವ್ವನ ಸಮಾನ ಅಂದ್ಕೋ...."[೧] ಎಂದು ಹೇಳುವುದರೊಂದಿಗೆ ಮಾತೃಹೃದಯ ತೆರೆದುಕೊಳ್ಳುತ್ತದೆ.

ದಿಕ್ಕಿಲ್ಲದವನೆಂದು ಮಾದೇವಿಯ ತಂದೆ–ತಾಯಿ ಇವನನ್ನು ಬೈದಿದ್ದರಾದರೂ ಮಕ್ಕಳಿಲ್ಲದ ಸಾಕವ್ವ ಇವನಿಗೆ ದಿಕ್ಕಾಗಿ ಬಂದಿದ್ದಳು. ಅವ್ವನಂತೆ ಆದರಿಸಿದ್ದಳು. ಇವನ ಕಥೆ ಕೇಳಿದ ಮೇಲಂತೂ ಇವನ ಬದುಕನ್ನು ರೂಪಿಸುವುದಕ್ಕೆ ದಾರಿ ಮಾಡಿಕೊಟ್ಟಳು. ತಬ್ಲಿ ಮಾಲಿಂಗುಗೆ ತಾಯಿಯಾಗಿ ಗಂಗೆಯನ್ನು ಮದುವೆ ಮಾಡಿಸಿದಳು. ಗಂಗೆ ಮೂಕ ಹುಡುಗಿ. ಹಾಗಾಗಿ ಮಾಲಿಂಗು ಗಂಗೆ ಇಬ್ಬರ ಬಾಳಿಗೂ ಬೆಳಕಾಗಿ ತನ್ನ ಘನತೆಯನ್ನು ಮೆರೆದಿದ್ದಾಳೆ.

'ಕರಗವ್ವ' ಕಥೆಯಲ್ಲಿನ ಕರಗವ್ವ ಗಂಡನನ್ನು ಬಿಟ್ಟು ನಾಟಕದ ಮೇಷ್ಟ್ರು ಜೊತೆ ಓಡಿಬಂದಿದ್ದಳು. ಆ ನಾಟಕದ ಮೇಷ್ಟ್ರು ಇವಳನ್ನು ಒಬ್ಬಂಟಿಯಾಗಿ ಬಿಟ್ಟು ಹೊರಟುಹೋಗಿದ್ದ. ಆದರೆ ಹಿಂದೆ ಮಾಡಿದ ತಪ್ಪನ್ನು ಮತ್ತೆ ಮಾಡದೆ ಕರಗವ್ವ ಒಂಟಿತನದಲ್ಲಿಯೂ ಸಾರ್ಥಕತೆ ಕಂಡುಕೊಳ್ಳತೊಡಗಿದಳು. ತನಗೆ ಮಕ್ಕಳಿಲ್ಲದಿದ್ದರೂ ಊರಿನ ಮಕ್ಕಳನ್ನೇ ತನ್ನ ಮಕ್ಕಳಂತೆ ಬಹಳ ಅಕ್ಕರೆಯಿಂದ ಕಾಣುತ್ತಾ ದಿನಾ ಒಂದೊಂದು ಕಥೆಯನ್ನು ಹೇಳುತ್ತಾ ತಾನೂ ಕಥೆಯಾಗಿದ್ದಳು.

ಹೊಲಗದ್ದೆಗಳಲ್ಲಿ ತೆನೆ ಕಟ್ಟುವಾಗ ಉದುರಿದ ಧಾನ್ಯಗಳನ್ನು ಸಂಗ್ರಹಿಸಿ, ಒಣಗಿಸಿ, ಹಕ್ಕಿ ಪಕ್ಷಿಗಳಿಂದ ಆ ಧಾನ್ಯವನ್ನು ಜೋಪಾನ ಮಾಡಿ ಜೀವನ ಸಾಗಿಸುತ್ತಿದ್ದರೂ ಸಹ ತನ್ನ ಅಸಹಾಯಕತೆಯನ್ನು ಎಂದೂ ತೋರಿಸಿಕೊಳ್ಳುತ್ತಿರಲಿಲ್ಲ.

ಆಕಾಶ ಹೊದಿಕೆ ಮಾಡಿ; ಭೂಮಿ ತೊಟ್ಲು ಮಾಡಿ
ಚಂದ್ರ ಸೂರ್ಯಾದಿಗಳ ತಾಳ ದೀವಿಗೆ ಮಾಡಿ
ಗುಡುಗು ಮಿಂಚ ಶಂಖ ಜಾಗಟೆ ಮಾಡಿ
ಕಪ್ಪಡಿ ಕೈಲಾಸದ ಗುರುವೆ"[೨]

ಎಂದು ಹಾಡುತ್ತಾ ಮಕ್ಕಳಿಗೆ ಕಥೆಗಳನ್ನು ಸ್ವಾರಸ್ಯಕರವಾಗಿ ಹೇಳುತ್ತಾ ಮಕ್ಕಳನ್ನು ಆ ಮೂಲಕ ಸಮಾಜವನ್ನು ತಿದ್ದುವ ಕೆಲಸ ಮಾಡುತ್ತಿದ್ದಳು. ತಾಯಿಗೆ ಇರಬೇಕಾದ ಸಂಯಮದ ಬಗ್ಗೆ ನಂಜಿಗೆ ಆಶ್ಚರ್ಯವಾಗುವ ರೀತಿಯಲ್ಲಿ ಅವಳ ಮಗನನ್ನು ಕುರಿತು ಬುದ್ದಿ ಹೇಳುತ್ತಾಳೆ. ಊರಿನ ಕೆಂಚಪ್ಪ ಮತ್ತು ಪೂಜಾರಿ ಸೆಕ್ರೆಟರಿ ಸೇರಿ ಇವಳ ಹತ್ರ ಇದ್ದ ಅಲ್ಪಸ್ವಲ್ಪ ಹಣವನ್ನು ಲಪಟಾಯಿಸುವ ಹುನ್ನಾರದಲ್ಲಿದ್ದಾಗ 'ಪಿಂಚಣಿ'ಯನ್ನೇ ಬೇಡವೆಂದು ನಿರ್ಧರಿಸುತ್ತಾಳೆ. ಆ ಸಂದರ್ಭದಲ್ಲಿನ ಕರಗವ್ವನ ಮಾತು ಇಡೀ ವ್ಯವಸ್ಥೆಯನ್ನೇ ಅಣಕಿಸುವಂಥದ್ದು.

"ಇಲ್ಲದ ಆಸೆ ತೋರುಸ್ಕೊಂಡು ನನ ಹಟ್ಟಿ ಬಾಕುಲ್ಗೆ ಬಂದ್ರೆ ಪೊರ್ಕೆ ತಕೋತೀನಿ ಅಂತ ಹೇಳಿ ಕಳಿಸಿವ್ನಿ. ನನ್ನೋನೇನು ಪಿಂಚಣಿ ಸಿಕ್ತದೆ ಅಂತ ಕಲೆಗಾರ ಆಗ್ನಿಲ್ಲ; ನಾನು ಸತ್ರೂ ನೀನು ಪಿಂಚಣಿಲೇ ಬದುಕೀವಂತೆ ಬಾ ಅಂತ ಕರ್‍ಕೊಂಡು ಬರನಿಲ್ಲ. ಬುಡು.... ಬುಡು...."[೩]

ದುಡ್ಡಿನಿಂದಲೇ ಎಲ್ಲವನ್ನೂ ಅಳೆಯುತ್ತಿರುವ ಇಂದಿನ ಸಮಾಜಕ್ಕೆ ಇದೊಂದು ಮಾದರಿ ಪಾತ್ರ ಎನ್ನಬಹುದು. ಇನ್ನು 'ಅವಲಂಬನೆ' ಕಥೆಯಲ್ಲಿ ರೈಲ್ವೆ ಸ್ಟೇಷನ್ನಿನ ಹತ್ತಿರ ಭಿಕ್ಷೆ ಬೇಡುವ ಮುದುಕಿ ನಿರ್ಗತಿಕಳಾಗಿ ಅನಾರೋಗ್ಯದಿಂದ ನರಳುತ್ತಿದ್ದಾಗ ಚೆಲುವ ಎರಡು ಇಡ್ಲಿ ಕೊಟ್ಟುದ್ದಕ್ಕಾಗಿ ಕೃತಜ್ಞತೆ ಸಲ್ಲಿಸುವುದು ಚೆನ್ನಾಗಿ ಚಿತ್ರಿತವಾಗಿದೆ.

"ಮೊಗಾ, ನೆನ್ನಿಂದೇನೂ ಹೊಟ್ಗೆ ಇಲ್ಲ ಕನಪ್ಪ, ಇಡ್ಲಿ ಏನಾರಾ ಮಿಕ್ಯಾವಾ ತಮ್ಮಾ, ಇಲ್‌ದಿದ್ರೆ ಹೋಗ್ಲಿ ಕುಕ್ಕೆ ಅಡಿ ಬಿದ್ದಿರೋ ಚೂರು ಪಾರು ಹುಡಿನಾದ್ರೂ ನೋಡಪ್ಪ ಮೊಗಾ ಈ ಉರಿಯೋ ಹೊಟ್ಗೆ ಅಷ್ಟಾದ್ರೂ ಹಾಕ್ತಿನಿ"[೪]

ಎನ್ನುವಂತಹ ಸ್ಥಿತಿಯಲ್ಲಿದ್ದವಳು ಎರಡು ಇಡ್ಲಿ ತಿಂದು 'ಇವತ್ತೇನಾರ ದುಡ್ಡು ಸಿಕ್ರೆ ನಾಳಿಕ್ಕೆ ತೀರುಸ್ತಿನಿ'" ಎನ್ನುವಂತ ಮಾತು ಭಿಕ್ಷುಕಿಯಾಗಿದ್ದರೂ, ಚೆಲುವನ ಸ್ಥಿತಿ ಅರಿತು ಹಣ ಕೊಡುವುದಾಗಿ ಹೇಳುವುದು ಬದುಕಿನ ಬಯಕೆಯನ್ನು ತಿಳಿಸುತ್ತದೆ.

'ಹಮೀದಾಯಣ' ಕಥೆಯಲ್ಲಿನ ಹಮೀದನ ತಾಯಿಯ ಪಾತ್ರ ಮತ್ತೊಂದು ನೆಲೆಯಲ್ಲಿ ಗೋಚರಿಸುವಂತದ್ದು. ಹಮೀದ ಅಂತರ ಧರ್ಮೀಯ ವಿವಾಹವಾಗಲು ಮುಂದಾದಾಗ ಇಡೀ ಊರೇ ಇವರ ವಿರುದ್ಧ ತಿರುಗಿ ಬೀಳುತ್ತದೆ. ಅವನನ್ನು ಕೊಲ್ಲುವುದಾಗಿ ಹೆದರಿಸುತ್ತಾರೆ. ಒಬ್ಬನೇ ಮಗನಾದ್ದರಿಂದ ಅವನನ್ನು ಪುಸಲಾಯಿಸಿ ಎಲ್ಲಾರ ಹೋಗಿ ಬದುಕ್ಕೊಳ್ಳಿ ಎಂದು ಕಳುಹಿಸಿದುದರಿಂದಲೇ ಹಮೀದ ಜೀವ ಉಳಿಸಿಕೊಂಡು ಬದುಕು ನಡೆಸುವಂತಾಯ್ತು. ತನ್ನ ಕೊನೆಯ ಕಾಲದಲ್ಲಿ ಇದ್ದ ಒಬ್ಬ ಮಗನನ್ನು ದೂರ ಮಾಡಿಕೊಂಡು ಊರಿನಲ್ಲೇ ಉಳಿದದ್ದು ಅವಳ ಗಟ್ಟಿತನಕ್ಕೆ ಸಾಕ್ಷಿಯಾಗುತ್ತದೆ.

'ಮುಂಗಾರು ಮಳೆಯ ಸಂಜೆ' ಎಂಬ ಕಥೆಯಲ್ಲಿನ ತಾಯವ್ವ ಪಾತ್ರ ಹೊಸದೊಂದು ಚೈತನ್ಯ ತುಂಬುವ ಪಾತ್ರ. ಈ ಕಥೆಯಲ್ಲಿ ತಾಯವ್ವ ಮೊಮ್ಮಗ ಚಿನ್ನಸ್ವಾಮಿಯನ್ನು ಚಿಕ್ಕ ವಯಸ್ಸಿನಲ್ಲಿ ಕಾಯಿ ಕದ್ದ ಅಂತ ಬೈದು ಕತ್ತು ಹಿಡಿದು ಆಚೆ ತಳ್ಳಿರುತ್ತಾಳೆ. ಅದೇ ನೆಪದಿಂದ ಚಿನ್ನಸ್ವಾಮಿಯೂ ಮನೆ ಬಿಟ್ಟು ಬಹಳ ವರ್ಷಗಳಾಗಿರುತ್ತವೆ. ಅಂದು ಹೋದ ಚಿನ್ನಸ್ವಾಮಿ ಬರಲೇ ಇಲ್ಲವಲ್ಲ ಎಂಬ ಹೊರಗಿನಿಂದ ತಾಯವ್ವ ಮನೋರೋಗಕ್ಕೆ ಒಳಗಾಗಿರುತ್ತಾಳೆ. ಅಂತಹ ಸಂದರ್ಭದಲ್ಲಿ ಕಾಲರಾ ಪೀಡಿತ ಪ್ರದೇಶಗಳ ಮಾಹಿತಿ ಸಂಗ್ರಹಕ್ಕೆಂದು ಬಂದಿದ್ದ ಆರೋಗ್ಯ ಇಲಾಖೆಯ ನಿಂಗನನ್ನೇ ತನ್ನ ಮೊಮ್ಮಗನೆಂದು ಅಕ್ಕರೆಯಿಂದ ಚೇತರಿಸಿಕೊಳ್ಳುತ್ತಾಳೆ. ನಿಂಗ ಆ ತಾಯವ್ವನ ಮನೋಸ್ಥೈರ್ಯ ತುಂಬಲು ತಾನು ಮೊಮ್ಮಗನ ಸ್ನೇಹಿತನೆಂದು ಹೇಳಿ ಅವನು ಬರುತ್ತಾನೆಂದು ಹೇಳುತ್ತಾನೆ. ಆ ಒಂದು ಮಾತಿಗೇ ಈಗಲೋ ಆಗಲೋ ಸಾಯುವ ಸ್ಥಿತಿಯಲ್ಲಿದ್ದ ಮುದುಕಿ ಚೇತರಿಸಿಕೊಂಡು ಹದಿನೈದು ವರ್ಷ ಚಿಕ್ಕವಳಂತಾಗುತ್ತಾಳೆ.

ತಲೆಮಾರುಗಳ ಇತಿಹಾಸ ಹೇಳುತ್ತಿದ್ದ ಮುದುಕಿ ತನಗಿದ್ದ ಸ್ವಲ್ಪ ಜಮೀನನ್ನೇ ಸರೀಕರ ಎದುರು, ಆಸ್ತಿ ಕಿತ್ತುಕೊಳ್ಳಲು ಹವಣಿಸುತ್ತಿದ್ದವರ ಎದುರು ಬಾಯಿಕಟ್ಟಿ ಕಾಪಾಡಿಕೊಂಡು ಬದುಕುತ್ತಿತ್ತು ಎನ್ನುವ ಚಿತ್ರಣ. ಲಂಕೇಶ್‌ರವರ 'ಅವ್ವ' ಕವಿತೆಯನ್ನು ನೆನಪಿಸುತ್ತದೆ.

ನಿಂಗನನ್ನೇ ತನ್ನ ಮೊಮ್ಮಗನಂತೆ ತಳಿದು ತೋರಿಸುತ್ತಿದ್ದ ಅಕ್ಕರೆಗೆ, ಆತನ ಇನ್ನೊಬ್ಬ ಮೊಮ್ಮಗ "ನೀ ಸತ್ತಾಗ ತಲೆಗೊಳ್ಳಿ ಹಿಡಿದು ತಲೆ ಬೋಳಿಸ್ಕೊಂಡು ನಿನ್ಗೆ ಸದ್ಗತಿ ಕಾಣ್ಸೋ

ನಿನ್‌ರಕ್ತ ಅದು! ಅಲ್ವೇ ಹೋಗೇ ಮುದಿ ಮುಂಡೆ...." ಎಂದು ಬೈಯುತ್ತಿರುವಾಗ ನಿಂಗನಿಗಾದ ಮುಜುಗರವನ್ನು ಗಮನಿಸಿದ ಮುದುಕಿ,[೬]

> "ಥೂ ನಿನ್ ಬಾಯ್ಗೆ ನನ್ ಬಟ್ಟೆ ತುರ್ಕ, ಅವನೇ ನನ್ ಮಗಾ ಕನೋ, ನನ್ ಕಳ್ಳು ಬಳ್ಳೀನೆ ಕನೋ ಗಿರೇಸ್ತ. ಕೀಚುಗ್ನ ಕಿಳೇಲಿ ಇರ್‌ಬ್ಯಾಡ ಕರುಬ್ನ ನೆರೇಲಿರ್‌ಬ್ಯಾಡ ಅಂತ ಕಾಣ್ದೆ ಹೇಳವ್ರೇನೋ ಪಾಪ್ರ. ಕೆಟ್ರೊ ನಿನ್‌ಕೈಯಿಂದ ಮೂರ್‌ಕಾಳು ನೀರ್‍ನೂ ಬುಡಿಸ್ಕೊಳ್ಳಾಕ್ಕಿಲ್ಲ ಕಂತೆ"[೭]

ಎಂದು ಬೈದು ನಿಂಗನನ್ನು ಸಮಾಧಾನಿಸುವುದರಲ್ಲಿ ಮಮತೆಯ ಆಳದ ಪರಿಚಯವಾಗುತ್ತದೆ. ಇಲ್ಲಿ ಗಮನಿಸುವ ಅಂಶವೆಂದರೆ ಸ್ಥಗಿತಕ್ಕೆ ಒಳಗಾಗದೆ ಜಗಿತಕ್ಕೆ ಅಣಿಯಾಗಿ ನಿಂಗನನ್ನು ಮೊಮ್ಮಗನೆಂದು ತಿಳಿಯುವ ತಾಯವ್ವನ ಪಾತ್ರ ನಿರಾಶವಾದಕ್ಕೆ ಸವಾಲಾಗುವ ಪಾತ್ರ

'ನಿಚ್ಚಯ' ಕಥೆಯ ಗೀತಾಳ ತಾಯಿ ಜಾತಿ ವ್ಯವಸ್ಥೆಯ ಪ್ರತಿಷ್ಠೆಗೆ ಬಲಿಯಾದ ಮಗಳ ಸ್ಥಿತಿಯನ್ನು ಕಂಡು ಮುಟ್ಟಿಸಿಕೊಳ್ಳದೇ ಅನುಭವಿಸುವ, ತನ್ನಂತೇ ಇವಳೂ ಇರಬೇಕೆನ್ನುವ ಸಂಪ್ರದಾಯಸ್ಥ ಪಾತ್ರ.

'ನೆರೆ' ಕಥೆಯ ಪುಟ್ಟಬಸವನ ತಾಯಿ ತನ್ನ ಮೈದುನನ ಜೊತೆಗೇ ಅನೈತಿಕ ಸಂಬಂಧವಿರಿಸಿಕೊಂಡಿರುತ್ತಾಳೆ. ಅದನ್ನು ತಿಳಿದು ಊರ ಬಿಟ್ಟು ಹೋದ ಮಗನಿಗಾಗಿ ಜೀವವನ್ನು ಹಿಡಿದು ಕಾಯುತ್ತಿರುತ್ತಾಳೆ. ತನ್ನ ಅಂತಹ ಸ್ಥಿತಿಗೆ ಕಾರಣ ತನ್ನ ಮಗನನ್ನು ಚೆನ್ನಾಗಿ ಬೆಳೆಸಬೇಕೆನ್ನುವುದೇ ಆಗಿರುತ್ತದೆ. ತಾಯಿಯ ಅಕ್ರಮ ಸಂಬಂಧವನ್ನು ತಿಳಿದ ಪುಟ್ಟಬಸವ ಊರು ಬಿಟ್ಟು ಹೋಗುವಾಗ ನೆರೆ ಬಂದ ಕಾರಣ–ಜೀವ ಉಳಿಸಿಕೊಂಡು ಊರೂರು ಅಲೆದನು. ಎತ್ತಿನಗಾಡಿಯಿಂದ ಬಿದ್ದ ಹೆಂಗಸು ಮತ್ತು ಮಗುವಿನ ಸಾವು, ಊರು ಬಿಟ್ಟು ಊರು ಬಂದವನಿಗೆ ಜನರು ಆಡುವ ಮಾತುಗಳಿಂದ ಮಾನಸಿಕ ಹಿಂಸೆಯನ್ನು ಅನುಭವಿಸುತ್ತಿದ್ದರು. ಅದರಿಂದ ಕೋಪಗೊಂಡ ಪುಟ್ಟಬಸವ ತಾಯಿಯನ್ನೂ ತನ್ನ ಚಿಕ್ಕಪ್ಪ ರುದ್ರಪ್ಪನನ್ನೂ ಬಲಿ ಹಾಕಬೇಕೆಂದು ಬಂದವನಿಗೆ ತನ್ನ ತಾಯಿ ತಾನು ಮನೆ ಬಿಟ್ಟಾಗಿನಿಂದಲೂ ಅನ್ನ ನೀರು ಬಿಟ್ಟು ಹಾಸಿಗೆ ಹಿಡಿದಿರುವುದನ್ನು ತಿಳಿದು ಶಾಂತನಾಗಿ ತಾಯಿಯ ಮಹತ್ವವನ್ನು ಮನಗಾಣುತ್ತಾನೆ.

ಇಂದು ತಾಯ್ತನದ ಪ್ರತೀಕ್ಷೆಯ ಆಚರಣೆಗಳೆಲ್ಲಾ ಹೋಗಿ ಬರೀ ಆಡಂಬರದ ಐಷಾರಾಮಿ ಬದುಕೇ ಬೇರೆ ಎಲ್ಲದರ ಸ್ಥಾನವನ್ನು ಆಕ್ರಮಿಸಿದೆ. ಮರೆಯಾಗುತ್ತಿರುವ ಲಾಲಿತ್ಯ, ಮಮತೆಯ ಸೌಂದರ್ಯಗಳನ್ನು ನೆನಪು ಮಾಡಿಕೊಳ್ಳಲೂ ಸಹ ಇಂದಿನ ಜೀವನದ

ಗಡಿಬಿಡಿಯಲ್ಲಿ ಅವಕಾಶವೇ ಆಗುತ್ತಿಲ್ಲ. ಹಾಗಾಗಿ ಚಿಕ್ಕಣ್ಣನವರ ಕಥೆಗಳಲ್ಲಿನ ವೃದ್ಧ ತಾಯಂದಿರ ಮಮತೆ ನಮ್ಮನ್ನು ಯೋಚಿಸುವ ಹಾಗೆ ಮಾಡಬಲ್ಲವು. "ಇಂದು ನಾವು ಮಕ್ಕಳನ್ನು ಸಾಕುತ್ತೇವೆ. ನಮಗೆ ವಯಸ್ಸಾದಾಗ ಅವರು ನಮ್ಮನ್ನು ಸಾಕುವುದು ಅವರ ಕರ್ತವ್ಯ" ಎಂದು ವಾದ ಮಂಡಿಸುತ್ತಾ ತಾಯ್ತನವನ್ನು ಮರೆತು ಅಧಿಕಾರ ಮೆರೆಯುವ ತಾಯಂದಿರಿಗೆ ಚಿಕ್ಕಣ್ಣನವರ ಕಥೆಗಳಲ್ಲಿನ ಈ ಮೇಲಿನ ಪಾತ್ರಗಳು ಆದರ್ಶವಾಗಬಲ್ಲವು ಎನ್ನಿಸುತ್ತದೆ.

## ಅಡಿ ಟಿಪ್ಪಣಿ

೧. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೧೯

೨. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ- ೩೧

೩. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೪೧

೪. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೪೮

೫. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೧೦೧

೬ ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೧೨೫

೭. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೧೨೫

# ಅಧ್ಯಾಯ – ೫

## ಚಿಕ್ಕಣ್ಣನವರ ಕಾವ್ಯಾತ್ಮಕತೆ

ಚಿಕ್ಕಣ್ಣನವರ ಕಥೆಗಳಲ್ಲಿ ಹಳ್ಳಿಯ ಬದುಕಿನ ಹಲವು ಮುಖಗಳು ಸಹಜವಾಗಿ ಅನಾವರಣಗೊಂಡಿವೆ. ಹಾಗೆ ಅನಾವರಣಗೊಳ್ಳುವಿಕೆಯಲ್ಲಿ ಒಳ್ಳೆಯ ಕಥನ ಶೈಲಿ, ಹಳ್ಳಿಯ ಭಾಷೆಯ ಮೇಲೆ ಸೊಗಸಾದ ಹಿಡಿತ ಹಾಗೂ ಪಾತ್ರ ಚಿತ್ರಣ ಶಕ್ತಿಗಳು, ಹಳ್ಳಿಯ ಪರಿಸರದ ಜೀವದ್ಭಾಷೆಯ ಬಾಗು, ಬೆಳಕು, ಬನಿ, ಸೊಗಡು, ಹರಿತ, ಚಿತ್ರಕ ಶಕ್ತಿ, ನೆಲದ ಸಂಸ್ಕೃತಿಯ ಸಹಜತೆ ಇವು ಚಿಕ್ಕಣ್ಣನವರ ಕಥೆಗಳ ವಿಶೇಷತೆಯನ್ನು ತೋರುವಂತಹವು.

ಕಂಡೇರಿಯ ಕಥೆಗಳಲ್ಲಿ ನಿರ್ದಿಷ್ಟವಾಗಿ ಎರಡು ಮಾದರಿಗಳನ್ನು ಗುರುತಿಸಬಹುದು. ಅವೆಂದರೆ ನಿರೂಪಣೆ ಮತ್ತು ಸಂಭಾಷಣೆ. ಇಲ್ಲಿ ಸಂಭಾಷಣೆ ಪ್ರಧಾನವಾಗಿ ಕಥೆಗಳು ಅತಿ ಕಡಿಮೆ. ಭಾಷೆ ಒಂದು ಅಮೂರ್ತ ವ್ಯವಸ್ಥೆಯಲ್ಲ. ಅದು ಸಾಮಾಜಿಕ ಚಟುವಟಿಕೆ, ಅದೊಂದು ಸಂಭಾಷಣೆ ಎಂಬುದು ಗಮನಾರ್ಹ. ಕಂಡೇರಿಯಲ್ಲಿ ನಿರೂಪಣೆ, ವಿವರಣೆ ವರ್ಣನೆಗಳ ಕಥೆಗಳೇ ಹೆಚ್ಚಾಗಿವೆ. ಕೃತಿಯ ನಿರೂಪಕನು ಕಂಡೇರಿಯ ಹೆಚ್ಚಿನ ಕಥೆಗಳಲ್ಲಿ ಕೃತಿಯ ಒಳಗೆ ಕಾಣಿಸುತ್ತಾನೆ. ಓದುಗನೂ ಕೃತಿಯ ಒಳಗೆ ಅಥವಾ ಹೊರಗೆ ಇರುವುದು ಕಂಡೇರಿಯ ವಿಶಿಷ್ಟತೆಗಳಲ್ಲಿ ಒಂದು. ಬರಹಗಾರರ ಮತ್ತು ಓದುಗರ ಸಂಬಂಧ ಕಥೆ ಹೇಳುವವನ ಮತ್ತು ಕೇಳುವವನ ಸಂಬಂಧದಂತೆ ಆತ್ಮೀಯವಾಗಿರುವುದು ಎದ್ದು ಕಾಣುತ್ತದೆ.

ಇಲ್ಲಿನ ಕಥೆಗಳಲ್ಲಿನ ತಂತ್ರ ಕಣ್ಣಿಗೆ ಹೊಡೆಯುವಂತದ್ದಲ್ಲ. ಭಾಷೆ ಅತ್ಯಂತ ಸರಳ ಮತ್ತು ಸ್ಪಷ್ಟ ಅದಕ್ಕೆ ಆಡಂಬರ ಶ್ರೀಮಂತಿಕೆಗಳಿಲ್ಲ. ಸರಳ ಸುಭಗತೆಯಿಂದ ಕೂಡಿ; ದೇಸೀಯತೆಯ ಸೊಗಡಿನಿಂದ ಪರಿಮಳಭರಿತವಾಗಿದೆ.

ಕಥೆಗಳ ನಿರೂಪಣೆಯಲ್ಲಿ ಬಳಕೆಯಾಗುವ ಶೈಲಿಗಳ ಮಿಶ್ರಣ, ವಿಡಂಬನೆ, ಆತ್ಮಾವಲೋಕನ, ಭಾವಗೀತಾತ್ಮಕ ಉತ್ಕಟತೆ, ನಾಟಕೀಯತೆ ಇಂಥ ವಿವಿಧ ಧ್ವನಿಗಳ ಪ್ರಯೋಗವನ್ನು ಚಿಕ್ಕಣ್ಣನವರ ಕಥೆಗಳಲ್ಲಿ ಕಾಣಬಹುದು.

ಭೂತವರ್ತಮಾನಗಳ ನೆನಪಿನ ಕೊಂಡಿಯ ತಂತ್ರವನ್ನು 'ತಂತ್ರಗಾರಿಕೆ ಅನ್ನಿಸದಂತೆ ಬಹಳ ಸಹಜವಾಗಿ ಬಳಸಲಾಗಿದೆ. ವಸ್ತು, ಕಥಾರೂಪ, ತಂತ್ರ, ಭಾಷೆ, ಶೈಲಿಗಳ ದೃಷ್ಟಿಯಿಂದ

ಮೈಸೂರು ಜಿಲ್ಲೆಯ ಕೆ.ಆರ್. ನಗರದ ಸುತ್ತಮುತ್ತ ಪ್ರಚಲಿತವಿರುವ, ಒತ್ತಕ್ಷರವನ್ನು ತೇಲಿಸಿ ಮಾತಾಡುವ ಭಾಷೆ ಚಿಕ್ಕಣ್ಣನವರ ಕಥೆಗಳಲ್ಲಿ ಬಳಕೆಯಾಗಿದೆ.

ಚಿಕ್ಕಣ್ಣನವರ ಕಥೆಗಳೆಲ್ಲವೂ ಎಡಪಂಥೀಯ ಬಲವನ್ನು ಬಿಂಬಿಸುತ್ತವಾದರೂ ಅದನ್ನು ಮೀರಿ ಕಲಾತ್ಮಕ ಸಾರ್ಥಕತೆಯನ್ನು ಮೆರೆಯುತ್ತದೆ. ಇದ್ದಕ್ಕೆ ಕಾರಣ ಕಥೆಗಳ ಸಾಮಾಜಿಕ ನೆಲೆಗಟ್ಟು ಮತ್ತು ಅನುಭವದ ಅಧಿಕೃತತೆಯ ತೀವ್ರತೆ. ಭಾವನೆಗಳನ್ನು ತೀವ್ರತಮವಾಗಿ ಹೇಳುತ್ತಾ ಓದುಗರಲ್ಲಿ ಅನುಭವದ ಸಾಂಭವ್ಯತೆಯನ್ನು ಉಂಟುಮಾಡುವ ಭಾಷೆಯೂ ಕೂಡ ಕಲಾತ್ಮಕತೆಯ ಮೂಲವಾಗಿದೆ.

ವಸಾಹತುಶಾಹಿ ಅನುಭವದ ನಂತರ ಹುಟ್ಟಿಕೊಂಡ ದೇಶೀವಾದದ ಮುಖ್ಯ ಲಕ್ಷಣವೆಂದರೆ ಅದು ಪರಕೀಯ ಸಂಸ್ಕೃತಿಗಿಂತ ಹೆಚ್ಚಾಗಿ ದೇಶೀಯ ಸಂಸ್ಕೃತಿಯಲ್ಲಿ ಸೇರಿಕೊಂಡುಬಿಟ್ಟಿರುವ ಪರಕೀಯ ಅಂಶಗಳನ್ನು ವಿರೋಧಿಸುತ್ತದೆ. ದೇಶೀಯ ಬದುಕಿನ ರೂಪುರೇಷೆಗಳನ್ನು ಗುರುತಿಸಿಕೊಳ್ಳುವ ಧೋರಣೆಯೇ ಈ ದೇಸೀವಾದದ ಮುಖ್ಯಗುರಿ.

‘ಊರು ಹೆಬ್ಬಾವಿನಂಗೆ ಕತ್ತಲೆಯ ಹೊದ್ದುಕೊಂಡು ಬಿದ್ದಿವೆ’[೧]

ಕಾಮವನ್ನು ಅಭಿವ್ಯಕ್ತಿಸುವಾಗ ಲೇಖಕರಿಗೆ ಅಪೂರ್ವವಾದ ಸಂಯಮ ಪ್ರಾಪ್ತವಾಗಿದೆ. ಹೀಗಾಗಿ ಅದನ್ನು ಬಹಳ ಧ್ವನಿಪೂರ್ಣವಾಗಿ, ಸೂಚ್ಯವಾಗಿ ಪ್ರತಿಮೆಗಳ ಮೂಲಕ ಚೆನ್ನಾಗಿ ಅಭಿವ್ಯಕ್ತಿಸಿದ್ದಾರೆ. ಬೆವರಿನ ವಾಸನೆಯ ನಾಯಕಿಯ ಮನಸ್ಸಿನ ಹೊಯ್ದಾಟವನ್ನು ಒಳ ಮತ್ತು ಹೊರ ವಿವರಗಳನ್ನು ಮೂರ್ತಗೊಳಿಸುವಲ್ಲಿ ಕಥೆಗಾರ ತೋರಿಸುವ ಸಂಯಮ ಮತ್ತು ತಿಳುವಳಿಕೆ ಮೆಚ್ಚುವಂಥದ್ದು.[೨]

> “ಎದರು ಮನೆಯ ಸಾಬರ ಕೋಳಿ ಚರಂಡಿಯ ಹೊಲವನ್ನು ಕಾಲಿನಿಂದ ಕೆದಕಿ ಕೊಕ್ಕೊಕ್ಕೋ ಎಂದು ಕರೆದಿದ್ದಕ್ಕೆ ಚದುರಿದ ಅದರ ಮರಿಗಳು ಮಿಳಿಗುಟ್ಟುತ್ತಾ ಓಡಿಬಂದು ಕೂಡಿಕೊಂಡು, ತಾಯಿಕೋಳಿ ಕೆದಕಿಕೊಟ್ಟಿದ್ದನು ನುಂಗತೊಡಗಿದವು. ಪಕ್ಕದ ಕಡೆಯಿಂದ ಒಂದು ಹುಂಜ ಬಂದು ಮರಿಗಳನ್ನು ಸರಿಸಿ ಕೋಳಿಯನ್ನು ಮೆಟ್ಟಲು ಹಾತೊರೆಯಿತು. ಕೋಳಿ ಕೊರಗುತ್ತಾ ತನ್ನ ರೆಕ್ಕೆ ಪುಕ್ಕಗಳನ್ನು ಜೋತುಬಿಟ್ಟು ತಾನು ಬೆದೆಗೆ ಬಂದಿಲ್ಲವೆಂಬುದನ್ನು ತೋರಿಸಿತು. ಆ ಕಡೆ ನೆರಳಿನಲ್ಲಿ ನಿಂತಿದ್ದ ಹೇಟೆ ತನ್ನ ಭಾಷೆಯಲ್ಲಿ ತೀಟೆಯನ್ನು ತೋರಿಕೊಂಡಿತ್ತು. ಹುಂಜ ಅದ ಕಂಡ ತಕ್ಷಣ ಅತ್ತ ಓಡಿತ್ತು. ಹೇಟೆ ಹತ್ತಿರ

ಬಂತು. ಹುಂಜ ಸುತ್ತಾ ಸುತ್ತಿದಾಗ ಹೇಟೆ ಕೂತುಕೊಂಡು, ಹುಂಜಕ್ಕೆ ಅನುಕೂಲವಾಗುವಂತೆ ಪುಕ್ಕವನ್ನು ಮೇಲೆತ್ತಿತು. ಹುಂಜ ಅದರ ಮೇಲೆ ಹತ್ತಿ ಹೇಟೆಯ ಜುಟ್ಟನ್ನು ಕೊಕ್ಕಿನಿಂದ ಹಿಡಿದು ತನ್ನ ಪುಕ್ಕವನ್ನು ಕೆಳಬಾಗಿಸಿ, ಒಂದುಗೂಡಿ ಮೆಟ್ಟಿತು".

ನಿರೂಪಣಾ ಧಾಟಿಯನ್ನು ಹೇಳುವುದಾದರೆ ನಿರುದ್ವಿಗ್ನತೆ, ಸೃಜನಾತ್ಮಕ ಸಂದರ್ಭದಲ್ಲಿ ಜೀವನಾನುಭವಗಳನ್ನು ಶೋಧಿಸುವ ಬದುಕಿನ ಸಾಧ್ಯತೆಗಳನ್ನು ಅನ್ವೇಷಿಸುವ ನಿರಪೇಕ್ಷ ನಿಲುವಲ್ಲ. ಬದುಕಿನಲ್ಲಿನ ದುರಂತಕ್ಕೂ ಹೊರತಾದ ಇತರ ಸಾರ್ಥಕ್ಯ ಸಾಧ್ಯತೆಗಳನ್ನು ಕಂಡುಕೊಳ್ಳುವಂತಹವು.

ಕಂಡೇರಿಯ ಕಥೆಗಳಲ್ಲಿ ನಿರೂಪಿಸಿರುವ ಸಂಗತಿಗಳನ್ನು ಕಥೆಯ ಸಂದರ್ಭಕ್ಕೆ ತಕ್ಕಹಾಗೆ ತೀರಾ ಸಹಜವಾಗೇ ನಿರೂಪಿಸುತ್ತ ಒಂದು ಘಟನೆಗೂ ಇನ್ನೊಂದು ಘಟನೆಗೂ ಸಂಬಂಧವನ್ನು ಏರ್ಪಡಿಸಿ ಅವುಗಳ ಒಳ ಅರ್ಥಗಳನ್ನು ಹೆಚ್ಚಿಸುತ್ತ ಕಥೆಯನ್ನು ಎಣೆದಿರುವುದನ್ನು ಕಾಣಬಹುದು. ಎಂದೋ ಎಲ್ಲಿಯೋ ನಡೆದ ಪ್ರಸಂಗದಂತೆ, ಯಾರಿಗೋ ಹೇಳುತ್ತಿರುವಂತೆ ಜೊತೆ ಜೊತೆಗೇ ತನ್ನ ಅನುಭವವನ್ನು ತಾನೇ ಬಿಚ್ಚಿಕೊಳ್ಳುತ್ತಿರುವಂತೆಯೂ ಕೆಲವು ಭಾಸವಾಗುತ್ತವೆ. ಉದಾಹರಣೆಗೆ ಪಾಡು, ನಿರ್ಗಮನ, ಆಕೃತಿಗಳು, ನಿಶ್ಯಬ್ದವಾದವನು ಕಥೆಗಳು. ಕಥೆಯನ್ನು ನಿರೂಪಿಸುವವನು/ಳು ಪಾತ್ರವೂ ಹೌದು; ಕಥೆಯ ಆಶಯವನ್ನು ಹಿಡಿದುಕೊಡುವ ಕಥೆಗಾರನ ಪ್ರಜ್ಞೆಯ ಅವಿಭಾಜ್ಯ ಅಂಗವೂ ಹೌದು. ವಿಶಿಷ್ಟ ಸಂದರ್ಭದಲ್ಲಿ ವಿಶಿಷ್ಟ ಕೌಟುಂಬಿಕ ಮತ್ತು ಸಾಮಾಜಿಕ ಪರಿಸ್ಥಿತಿಯಲ್ಲಿ ಹುಟ್ಟಿಕೊಳ್ಳುವ ಅನುಭವದ ಎಳೆ-ಎಳೆಯನ್ನು ಬಿಚ್ಚುತ್ತಲೇ ಅರ್ಥ ಛಾಯೆಯನ್ನು ಸದ್ದಿಲ್ಲದೆ ಧ್ವನಿಸುವ ಪಾತ್ರಗಳೂ ಹೌದು.

ಚಿಕ್ಕಣ್ಣನವರ ಕಥೆಯಲ್ಲಿ ಅಚೇತನ ವಸ್ತು, ಸಂಗತಿಗಳಿಗೂ ಚೇತನ ರೂಪ ಕೊಡುವ ಸಂಕೇತ ಪ್ರತಿಮೆಗಳು, ಉಪಮೆ-ರೂಪಕಗಳು, ವರ್ಣನೆಗಳು, ರತಿ ವಿಷಯರ ವಿವರಗಳನ್ನು ಹೇಳುತ್ತಲೇ ಚೈತನ್ಯದ ಸಮೃದ್ಧಿತನದ ಅನಾವರಣವಾಗುತ್ತದೆ. ಹಾಗೂ ತಿಳಿಸಲೇಬೇಕಾದ ತಾತ್ವಿಕ ಅಂಶಗಳನ್ನು ಮೌನವಾಗಿ ಧ್ವನಿಸುತ್ತದೆ.

ಒಂದು ಪ್ರತಿಮೆಯ ಸುತ್ತ ಕತೆ ಹೆಣೆಯುವ ಕಲೆ ಅನುಭವಗಳನ್ನು ಎದುರಿಸುವ ದಿಟ್ಟತನ, ತೀಕ್ಷ್ಣತೆ, ಕಲಾಪ್ರಜ್ಞೆ, ಭಾಷೆಯ ಮೇಲಿನ ಸಹಜ ಪ್ರಭುತ್ವ-ಎಲ್ಲವೂ ಸೊಗಸಾಗಿದೆ. ಇಲ್ಲಿನ ಕಥೆಗಳ ನಿರೂಪಣೆಯಲ್ಲಿ ದೇಸೀತನವನ್ನು ಕಾಣಬಹುದು. 'ಕರಗವ್ವ', 'ಸತ್ಯವತಿ', 'ಕವಳ',

‘ದಾವರ’, ‘ಒಡಲುರಿ’ ಮುಂತಾದ ಹೆಸರುಗಳು ಪಾತ್ರಗಳ ಹೆಸರಿನ ಔಚಿತ್ಯಪೂರ್ಣ ಘಟನಾವಳಿಗಳನ್ನು ಅನಾವರಣಗೊಳಿಸುವ ಚಿಕ್ಕಣ್ಣನವರ ಕಥೆಗಳು ಗ್ರಾಮಜೀವನದ ತೋರುಗಂಬವಾಗಿಬಿಡುತ್ತವೆ. ಇಂತಹವುದೇನೇ ಸ್ತ್ರೀವಾದಿ ಸಿದ್ಧಾಂತದ ಅಸ್ತಿತ್ವಕ್ಕೆ ಸತ್ವ–ತತ್ವಗಳನ್ನೆಲ್ಲ ನೀಡಬಲ್ಲವು ಎನ್ನಬಹುದು.

ಅಲ್ಲದೆ ಕಥೆಯಲ್ಲಿ ಅಚ್ಚುಕಟ್ಟುತನ ಮತ್ತು ಕಲಾತ್ಮಕತೆ ಇದ್ದು ಪ್ರತಿ ಅಂಕಣಕ್ಕೂ ಬಳಸಿದ ಚಿತ್ರಗಳು ಹಾಗೂ ವಚನಗಳು, ಗಾದೆಗಳು ನಾಟಕದಂತೆ ಭಾಸವಾಗುತ್ತವೆ. ಲೇಖಕರು ಮಹಿಳೆಯರ ಪಾತ್ರವನ್ನು ಇಷ್ಟು ಚೆನ್ನಾಗಿ ಮೂಡಿಸಿರುವುದನ್ನು ಕಂಡರೆ ಲೇಖಕರೇ ಸ್ತ್ರೀ ಪಾತ್ರದಲ್ಲಿ ಪರಕಾಯ ಪ್ರವೇಶ ಮಾಡಿದ್ದಾರೇನೋ ಎನಿಸುತ್ತದೆ.

ಚಿಕ್ಕಣ್ಣನವರ ಬಹುತೇಕ ಕಥೆಗಳು ಗ್ರಾಮ ಸಂಸ್ಕೃತಿಯ ಪರಿಶೀಲನೆಗೆ ಆಕರಗಳಾಗುತ್ತವೆ. “ಸಮಾಜ–ನಿಸರ್ಗಗಳ ಪರಸ್ಪರ ಮಗ್ಗಲುಗಳನ್ನು ಗ್ರಾಮೀಣ ಪದರ ಪದರಿನಲ್ಲಿ ವಿವರಿಸುತ್ತಾ, ಮಾನವೀಯ ಸೆಲೆಯ ದಟ್ಟ ನೆಲೆಯನ್ನು ಪರಿಗಾಣಿಸುವುದೇ ಚಿಕ್ಕಣ್ಣನವರ ಹಿರಿಮೆ”.[೩]

ಚಿಕ್ಕಣ್ಣನವರ ಕಥೆಗಳಾದ “ಬೋರೆಯ ಮ್ಯಾಲೆ ಬಳೆಸರ ಬಿದ್ದಾವೆ”, “ಬೆಳ್ಳಕ್ಕಿ ಸಾಲು”, “ಹಸಿರು ಹರಳಿನುಂಗುರ”, “ಹಮೀದಾಯಣ”, ಮುಂಗಾರು ಮಳೆಯ ಸಂಜೆ”, “ಒಡಲುರಿ”, “ಸಪ್ಪಳಗಳು”, “ಕವಲು” ಮುಂತಾದಂತಹ ಕಥೆಗಳ ಶೀರ್ಷಿಕೆಗಳೇ ಕಾವತ್ವಗಳಿಂದ ತುಂಬಿ ಓದುವ ಗೀಳಿಗೆ ನಮ್ಮನ್ನು ಸೆಳೆಯುತ್ತವೆ.

## ಅಡಿ ಟಿಪ್ಪಣಿ

೧. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೨೧೯

೨. ಕಂಡೇರಿ : ಕಾ.ತ. ಚಿಕ್ಕಣ್ಣ, ಪುಟ-೩೦೪

೩. ಸೊಲ್ಲೆತ್ತಿ : ಡಾ॥ ಮಲ್ಲಿಕಾ ಘಂಟಿ, ಪುಟ-೧೮೮

# ಅಧ್ಯಾಯ – ೬

## ಸಮಾರೋಪ

ಪ್ರಸ್ತುತ "ಕಾ.ತ.ಚಿಕ್ಕಣ್ಣನವರ ಕಥೆಗಳಲ್ಲಿನ ಸ್ತ್ರೀಪಾತ್ರ ಚಿತ್ರಣ"–ಎಂಬ ಪ್ರಬಂಧವು ಸಂಪೂರ್ಣ ಸ್ತ್ರೀಕೇಂದ್ರಿತ ನೆಲೆಯಲ್ಲಿಯೇ ವಿವರಿಸಲ್ಪಟ್ಟಿರುವಂತದ್ದು ಹಾಗೂ ಸ್ತ್ರೀ ಜಗತ್ತಿನ ಬಾಹ್ಯ ಮತ್ತು ಆಂತರಿಕ ಸ್ಥಿತಿಗತಿಗಳ ಒಳಹೊಕ್ಕು ವಿವೇಚಿಸುವ ಪ್ರಯತ್ನ. ಚಿಕ್ಕಣ್ಣನವರ ಒಟ್ಟು ಕಥೆಗಳೇ ಮೂಲತಃ ಅಂತಹ ಗುಣವನ್ನು ಹೊಂದಿದೆ. ಚಿಕ್ಕಣ್ಣನವರ ಕಂಡೇರಿಯ ಹೆಚ್ಚಿನ ಕಥೆಗಳು ಯವುದೇ ಪೂರ್ವಾಗ್ರಹವಿಲ್ಲದೆ ಸಮಾಜದ ವಾಸ್ತವದ ಶೋಧನೆಯ ಬಗ್ಗೆ ತೀವ್ರ ತುಡಿತ ಮತ್ತು ವಿಶ್ಲೇಷಣಾತ್ಮಕವಾದ ವೈಜ್ಞಾನಿಕ ದರ್ಶನ ಮತ್ತು ಇಂದ್ರಿಯ ಅನುಭವಗಳನ್ನು ಮೀರಿದ ಮಾನವತೆಯ ಸತ್ಯ ಸೌಂದರ್ಯಗಳ ತತ್ವ ದರ್ಶನದ ಪ್ರಯತ್ನವಾಗಿವೆ.

ಬೇರೆ ಬೇರೆ ಸಂದರ್ಭಗಳಲ್ಲಿ ರಚನೆಗೊಂಡು ಇಲ್ಲಿನ ಕಥೆಗಳಲ್ಲಿ ಸಾಮಾಜಿಕ ವಿಷಮತೆ, ಅಸಮಾನತೆ, ಶೋಷಣೆ, ಅನ್ಯಾಯಗಳ ಬಗೆಗೆ ಮನಸ್ಸಿನ ಮೇಲ್ಪದರಿನಲ್ಲಿ ಉದ್ಭವಿಸುವ ತತ್‌ಕ್ಷಣದ ಭೌತವಾದೀ ತಾತ್ಕಾಲಿಕ ಅಸಹನೆ, ಆತಂಕಗಳ ಪ್ರಕಟಗೊಳ್ಳುವುದರ ಜೊತೆಜೊತೆಗೆ ಎಲ್ಲ ಸಮಸ್ಯೆ ಬಿಕ್ಕಟ್ಟುಗಳ ತಳದಲ್ಲಿರುವ ಒತ್ತಾಯ ಮೂಲಭೂತ ಸಮಸ್ಯೆಯನ್ನು ಗ್ರಹಿಸಲು ಇಲ್ಲಿನ ಕಥೆಗಳು ಒತ್ತಾಯಿಸುತ್ತವೆ. ಅವರವರ ಸತ್ಯವನ್ನು ಅವರವರೇ ಶೋಧಸಿಕೊಂಡ ಮಾದರಿಗಳಾಗಿ ಇವುಗಳಿಗೆ ಒಂದು ಅತೀ ಶಕ್ತವಾದ ಅರ್ಥದ ಆಯಾಮವಿದೆ.

ಚಿಕ್ಕಣ್ಣನವರ ಕಥೆಗಳು ಸೂಕ್ಷ್ಮ ಸಂವೇದನೆಗಳಿಂದ ಕೂಡಿರುವಂತಹವು. ಹಾಗಾಗಿ ಗ್ರಾಮೀಣ ಬದುಕಿನ ಅನುಭವಗಳು ಮತ್ತು ಗ್ರಾಮೀಣ ಬದುಕಿನಲ್ಲಿ ಹಾಸುಹೊಕ್ಕಾಗಿರುವ ನಾನಾ ವಿವಿಧ ಭಿನ್ನ ಭಿನ್ನ ಮನೋಭಾವದ ಪಾತ್ರ ಸ್ತರಗಳು ಕುತೂಹಲಕರವೂ, ಅಚ್ಚರಿದಾಯಕವೂ ಆಗಿಬಿಡುತ್ತದೆ. ಇವು ವ್ಯವಸ್ಥೆಯನ್ನು ಪ್ರತಿಬಿಂಬಿಸುವ ಸಾಕ್ಷಿಪ್ರಜ್ಞೆಗಳೂ ಆಗಿಬಿಡುತ್ತವೆ ಮಾತ್ರವಲ್ಲ, ವಿಡಂಬಿಸುವ ಪ್ರತಿಭಟಿಸುವ, ಬದಲಾಗಬೇಕಾದ ಗೊತ್ತು ಗುರಿಯನ್ನು ನಿರ್ದೇಶಿಸುವ ಅಮೂಲ್ಯವಾದ ಕೆಲಸವನ್ನು ಮಾಡುತ್ತಿರುತ್ತದೆ. ಇಂತಹ ಅನೇಕ ಅಂಶಗಳನ್ನು ಇಲ್ಲಿ ವಿವೇಚಿಸಲಾಗಿದೆ.

ಇಲ್ಲಿನ ಕಥೆಗಳನ್ನು ಕುರಿತು ಹೇಳುವುದಾದರೆ 'ಕತೆಯೆಂಬುದನ್ನು ಮನುಷ್ಯನ ಬದುಕನ್ನು ನೋಡಲಿಕ್ಕಿರುವ ಕಿಟಕಿ' ಎನ್ನುವಂತೆ ನಿರೂಪಿಸಲಾಗಿದೆ. ಇದಕ್ಕೆ ಕಾರಣ ಮನುಷ್ಯರ ಮೇಲಿನ

ಆಸಕ್ತಿಯೇ ಅವರ ಕಥನದ ದ್ರವ್ಯ, ಹಾಗಾಗಿ ಇಲ್ಲಿನ ಕಥೆಗಳು ಹಳ್ಳಿ ಪರಿಸರದಿಂದ ನಗರಕ್ಕೆ, ನಗರದ ಬೇಗೆ ಹೊತ್ತು ಹಳ್ಳಿಗೆ ಸಂಚರಿಸುತ್ತವೆ. ಇನ್ನೂ ಕೆಲವು ಕಥೆಗಳು ಹಳೆ ಮೌಲ್ಯಗಳನ್ನು ಪ್ರಶ್ನಿಸುತ್ತಾ ಶ್ರೇಷ್ಠತೆಯ ಹೆಸರಲ್ಲಿ ಇಡೀ ಮನುಷ್ಯ ಜನಾಂಗವನ್ನೇ ಅಧೀನವಾಗಿಟ್ಟುಕೊಂಡ ಸ್ಥಿತಿಯನ್ನು ಪ್ರಶ್ನಿಸುತ್ತಾ ಹೊಸ ಬದುಕಿನ ಕಡೆ ಕ್ರಿಯೆಯ ಮೂಲಕ ಪ್ರಶ್ನಿಸುತ್ತವೆ.

ಇಲ್ಲಿನ ಕಥೆಗಳು ಕೇವಲ ಒಬ್ಬ ವ್ಯಕ್ತಿಯ, ಒಂದು ಸಮಾಜದ ಒಂದು ತತ್ವದ ಜಿಜ್ಞಾಸೆಯಾಗಿರದೆ ಎಲ್ಲವನ್ನೂ ಒಳಗೊಂಡ ತನ್ನನ್ನು ತಾನೇ ಕಂಡುಕೊಳ್ಳದ ಆ ಸಲುವಾಗಿ ಜೀವಂತ ಕ್ಷಣದಲ್ಲಿ ಘರ್ಷಿಸಿಕೊಳ್ಳುವ ಕ್ರಿಯೆಯಾಗಿದೆ. ಅಂದರೆ ಅನೇಕ ವ್ಯಕ್ತಿಗಳು ಒಟ್ಟು ಬದುಕಿನ ಸಂದರ್ಭದಲ್ಲಿ ಜೀವನಾನುಭವಗಳನ್ನು ಪರಿಭಾವಿಸುವ ಆ ಮೂಲಕ ಒಂದು ಗಟ್ಟಿಯಾದ ಜೀವನ ದೃಷ್ಟಿಯನ್ನು ಧ್ವನಿಸುವಂತಹದ್ದು. ಹಾಗಾಗಿ ಇಲ್ಲಿನ ಕಥೆಗಳಲ್ಲಿ ಒಟ್ಟಾರೆ ಭಾವನಾತ್ಮಕ ಒತ್ತಡ, ಬೌದ್ಧಿಕ ಅರಿವು ಬದುಕಿನ ನಿಷ್ಠುರ ವಾಸ್ತವವನ್ನು ಮೀರುವ ಕನಸುಗಾರಿಕೆ– ಎಲ್ಲವನ್ನೂ ಏಕಕಾಲದಲ್ಲಿ ಎದುರಾಗುವಿಕೆಯನ್ನೂ ಕಾಣಬಹುದು.

ಪ್ರಸ್ತುತ ಚರ್ಚಿತವಾದ ಕಥೆಗಳು ಕೇವಲ ಮನೋರಂಜನೆಯಲ್ಲದೆ, ಕೇವಲ ಸಾಮಾಜಿಕ ಜಾಗೃತಿಯಾಗಲೀ ಅಲ್ಲದೆ ಅವೊಂದು ಬದುಕಿನ ಸತ್ಯದ ಅನಾವರಣವಾಗಿವೆ. ಇಡೀ ಕಥೆಗಳನ್ನು ಗಮನಿಸಿದರೆ ಇದೊಂದು ಜೀವನದ ಸಂಘರ್ಷದ ಕಥನವೇ ಆಗಿವೆ. ಅದರಲ್ಲಿ ಕಂಡೇರಿ ಕಥೆಗಳಲ್ಲಿ ಬರುವ ಸ್ತ್ರೀ ಸಂವೇದನೆ ಕೇವಲ ಆ ಪಾತ್ರಗಳದ್ದೇ ಅಲ್ಲ ಪ್ರತಿಯೊಬ್ಬ ಹೆಣ್ಣಿನ ಸಂವೇದನೆಯೂ ಹೌದು. "ಬಹುಶಃ ಎಂದೆಂದೂ ಅಂಚಿನಲ್ಲೇ ಉಳಿಯಬೇಕಾಗುವ ದುರಂತದ ಕಥನವೇನೋ ಎನ್ನುವ ಒಳ ಸತ್ಯವನ್ನು ಅನೇಕ ಕಥೆಗಳು ನುಡಿಯುತ್ತಿದೆಯೋ ಏನೋ" ಎನ್ನಿಸುತ್ತದೆ.

ಚಿಕ್ಕಣ್ಣನವರ ಕಥೆಗಳಲ್ಲಿ ವ್ಯಕ್ತಿ ಮತ್ತು ಪರಿಸರ ಇವುಗಳ ನಡುವಿನ ಸಂಬಂಧ ಮೇಲಿಂದ ಮೇಲೆ ಬೇರೆ ಬೇರೆ ಕಥೆಗಳಲ್ಲಿ ಬರುವುದರಿಂದ ನಮಗೆ ಗೊತ್ತಿರುವ ಜನ ಮತ್ತು ಆವರಣದ ಕಥೆ ಎಂಬಷ್ಟು ಆತ್ಮೀಯತೆ ಬೆಳೆಯುತ್ತಾ ಹೋಗುತ್ತದೆ. ಇಲ್ಲಿನ ಕಥೆಗಳು ಕಾಮ ಪ್ರೇಮ ಸಂಬಂಧಿಯಾದ ನೀತಿ–ಅನೀತಿಗಳನ್ನು ವ್ಯಾಖ್ಯಾನಿಸುವುದಕ್ಕೆ ಪೋಷಕ ದ್ರವ್ಯವಾಗಿ ಜೀವನೋತ್ಸಾಹದ ಸಂಕೇತಗಳಾಗಿಯೂ ಬರುತ್ತವೆ ಹಾಗೂ ಇಲ್ಲಿನ ಸ್ತ್ರೀ ಸಮೂಹ ಎಷ್ಟರ ಮಟ್ಟಿಗೆ ವಾಸ್ತವ ಜೀವನಾನುಭವದ ಆಧಾರದ ಮೇಲೆ ನಿರ್ಮಿತವಾಗಿದೆ ಎಂಬುದರ ಅರಿವಾಗುತ್ತದೆ. ಅಂದರೆ ಬೈಗುಳಗಳ ಸಮೇತ ಚಿತ್ರಿತವಾಗಿರುವುದನ್ನು ಕಾಣಬಹುದು.

ಚಿಕ್ಕಣ್ಣ ಗ್ರಾಮೀಣ ಸಂವೇದನೆಯುಳ್ಳ ಲೇಖಕ ಎಂಬುದು ಒಂದು ರೀತಿಯಲ್ಲಿ ಸರಿಯೇ ಆದರೂ ಅವರ ಒಟ್ಟು ದೃಷ್ಟಿ ಆತ್ಮಶೀದದ ಕಡೆಗೆ. ಮಿಕ್ಕ ಕತೆಗಾರರಂತೆ ಶೋಷಣೆಯೇ ಪ್ರಧಾನವಾಗಿರುವುದಾಗಲೀ ಅಥವಾ ಹಳ್ಳಿಯ ಚೆಲುವಿಕೆಯೇ ಮೆರೆಯುವುದಾಗಲೀ ಅವರಿಗೆ ಸ್ವಲ್ಪ ಪ್ರಮಾಣದಲ್ಲಿ ಬೇಕಾಗುತ್ತದೆ. ಆದರೆ ಅವರ ನಿಜವಾದ ಆಸಕ್ತಿ ಕಥೆಗಳ ಮುಖ್ಯ ಉದ್ದೇಶ ಇರುವುದು ವ್ಯಕ್ತಿಶೋಧದ ನೆಲೆಯಲ್ಲಿಯೇ. ಇವು ಮತ್ತೆ ಎರಡು ಅಂಗಗಳಲ್ಲಿ ಹುಟ್ಟುತ್ತವೆ. ಒಂದು ಹಳ್ಳಿಯ ಪರಿಸರದಲ್ಲಿ. ಇನ್ನೊಂದು ನಗರದ ಪರಿಸರದಲ್ಲಿ. ಶೋಷಣೆಯ ಚಿತ್ರಣವನ್ನು ಅಚ್ಚುಕಟ್ಟಾಗಿ ಕೊಡುವುದಕ್ಕಿಂತಲೂ ಅವರಿಗೆ ವ್ಯಕ್ತಿ ಕೇಂದ್ರದಲ್ಲಿ ನಿಂತು ವ್ಯವಸ್ಥೆಯನ್ನು ಅವಲೋಕಿಸುವುದು ಕಷ್ಟದ ಕೆಲಸ.

ಪ್ರಸ್ತುತ ಪ್ರಬಂಧವು ಪ್ರಮುಖವಾಗಿ ಎರಡು ತಲಮಾರುಗಳನ್ನು, ಭಿನ್ನ ಭಿನ್ನ ಪರಿಕರಗಳನ್ನು, ವಿಭಿನ್ನ ವ್ಯಕ್ತಿಗಳನ್ನು, ಎದುರು ಬದುರಾಗಿ ನಿರ್ದಿಷ್ಟ ಚೌಕಟ್ಟಿನಲ್ಲಿ ಜೀವನದ ಒಳನೋಟಗಳನ್ನು ನೀಡುವಲ್ಲಿ ಸಹಕಾರಿಯಾಗಬಹುದು. ಜೊತೆಗೆ ಕಥೆಗಳಲ್ಲಿ ಬರುವ ಗ್ರಾಂಥಿಕ ಭಾಷೆ, ಆಡುಭಾಷೆ, ಸಾಮಾಜಿಕ ಕೆಳವರ್ಗಗಳು ಉಪಯೋಗಿಸುವ ಗ್ರಾಮ್ಯಭಾಷೆ, ಪ್ರಾದೇಶಿಕ ಭಾಷಾ ಪ್ರಬೇದಗಳು ಕಥೆಗಳ ಒಡಲಿಗೆ ಜೀವ ತುಂಬುವ ಕೆಲಸ ಮಾಡುತ್ತವೆ. ಈ ಮೂಲಕವಾಗಿ ಅದು ವ್ಯಕ್ತಿ ಮತ್ತು ಸಮಾಜಕ್ಕೆ ಸಂಬಂಧಸಿದಂತೆ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ನೆಲೆಯಲ್ಲಿ ಎಲ್ಲ ಬಗೆಯ ಪಟ್ಟಭದ್ರ ಹಿತಾಸಕ್ತಿಗಳ ವಿರುದ್ಧ ಭಾಷೆಯ ಸಂವಿಧಾನದ ನೆಲೆಯಲ್ಲಾಗುವ ಪ್ರತಿಭಟನೆಯಾಗಿದೆ.

ಬಡತನ ಅಂದರೆ ಬರೀ ಅಳು, ದುಃಖ, ಗೋಳು ಎಂದು ಮಾತ್ರ ತಿಳಿದಿರುವುದು ಸಾಮಾನ್ಯ. ಆದರೆ ಇಲ್ಲಿನ ಅನೇಕ ಕಥೆಗಳಲ್ಲಿನ ಪಾತ್ರಗಳನ್ನು ಗಮನಿಸಿದಾಗ ಅಳು, ದುಃಖ, ಗೋಳುಗಳಿಗೆ ಬದಲಾಗಿ ಅಲ್ಲಿನ ಸ್ತ್ರೀಯರ ಬಾಳಲ್ಲೂ ಇರುವ ನಗು, ಲವಲವಿಕೆ, ರಂಜನೆಗಳು ಎಲ್ಲವನ್ನೂ ಕಾಣಬಹುದು. ಈ ಮೂಲಕವಾಗಿ ಪ್ರಸ್ತುತ ಪ್ರಬಂಧ ಗ್ರಾಮೀಣ ಸ್ತ್ರೀಯರ ವಾಸ್ತವ ಬದುಕಿನ ಯಥಾವತ್ ಚಿತ್ರಣವಾಗಿದೆ.

ಪ್ರಸ್ತುತ ಪ್ರಬಂಧ ಚಿಕ್ಕಣ್ಣನವರ ಕಥೆಗಳನ್ನು ಕುರಿತದ್ದಾದ್ದರಿಂದ ಅವರ ಕಥೆಗಳು ಯಾವುದೇ ಪೂರ್ವಾಗ್ರಹವಿಲ್ಲದೆ ಸಮಾಜದ ವಾಸ್ತವದ ಶೋಧನೆಯ ಬಗ್ಗೆ ತೀವ್ರ ತುಡಿತ ಮತ್ತು ವಿಶ್ಲೇಷಣಾತ್ಮಕವಾದ ವೈಜ್ಞಾನಿಕ ದರ್ಶನ ಮತ್ತು ಇಂದ್ರಿಯ ಅನುಭವಗಳನ್ನು ಮೀರಿದ ಮಾನವತೆಯ ಸತ್ಯ, ಸೌಂದರ್ಯಗಳ ತತ್ವ ದರ್ಶನದ ಪ್ರಯತ್ನಗಳಾಗಿವೆ. ಬೇರೆ ಬೇರೆ ಸಂದರ್ಭಗಳಲ್ಲಿ ರಚನೆಗೊಂಡ ಇಲ್ಲಿನ ಕಥೆಗಳಲ್ಲಿ ಸಾಮಾಜಿಕ ವಿಷಮತೆ, ಅಸಮಾನತೆ,

ಶೋಷಣೆ, ಅನ್ಯಾಯಗಳ ಬಗೆಗೆ ಮನಸ್ಸಿನ ಮೇಲ್ಪದರಿನಲ್ಲಿ ಉದ್ಭವಿಸುವ ತತ್‌ಕ್ಷಣದ ಭೌತವಾದೀ ತಾತ್ಕಾಲಿಕ ಅಸಹನೆ, ಆತಂಕಗಳು ಪ್ರಕಟಗೊಳ್ಳುವುದರ ಜೊತೆ ಜೊತೆಗೆ ಸಮಾಜದ ಎಲ್ಲ ಸಮಸ್ಯೆ ಬಿಕ್ಕಟ್ಟುಗಳ ತಳಹದಿಯಲ್ಲಿರುವ ಮೂಲಭೂತ ಸಮಸ್ಯೆಯನ್ನು ಗ್ರಹಿಸಲು ಇಲ್ಲಿನ ಕಥೆಗಳು ಸಾಧ್ಯವಾಗಿಸುತ್ತವೆ. ಅವರವರ ಸತ್ಯವನ್ನು ಅವರವರೇ ಶೋಧಿಸಿಕೊಳ್ಳಲು ಶಕ್ತವಾದ ಅರ್ಥದ ಆಯಾಮವನ್ನು ಇಲ್ಲಿನ ಕಥೆಗಳು ಕಟ್ಟಿಕೊಡುತ್ತವೆ.

ಪ್ರಸ್ತುತ ಪ್ರಬಂಧವು ಸ್ತ್ರೀಯ ಬದುಕನ್ನು ನೋಡಲಿಕ್ಕೆ ಇರುವ ಕಿಟಕಿ ಎನ್ನುವಂತೆ ನಿರೂಪಿತವಾಗಿದೆ. ಮನುಷ್ಯರ ಮೇಲಿನ ಆಸಕ್ತಿ ಇಲ್ಲಿನ ಕಥೆಗಳ ಮೂಲ ದ್ರವ್ಯ. ಹಾಗಾಗಿ ಅವು ಹಳ್ಳಿ ಪರಿಸರದಿಂದ ನಗರಕ್ಕೆ, ನಗರದ ಬೇಗೆ ಹೊತ್ತು ಹಳ್ಳಿಗೆ ಸಂಚರಿಸುತ್ತವೆ. ಚಿಕ್ಕಣ್ಣನವರು ಬರೆಯುತ್ತಿದ್ದ ಕಾಲದಲ್ಲೇ ಶುರುವಾದ ಜಾತಿ, ವರ್ಗ, ಲಿಂಗಗಳ, ಶೋಷಿತ ಜಗತ್ತನ್ನು ದೊಡ್ಡ ಮಟ್ಟದಲ್ಲಿ ಬಹಿರಂಗಪಡಿಸುವ, ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿಯುವ ಎಲ್ಲ ಪ್ರಯತ್ನಗಳನ್ನು ಕಥೆಗಳ ಮುಖೇನ ಪ್ರಬಂಧದಲ್ಲಿ ಕಾಣಬಹುದು. ಅದರಲ್ಲೂ ಪ್ರಮುಖವಾಗಿ ಶೋಷಿತರ ಪರ ನಿಲುವನ್ನು ಕಾಣಬಹುದು. ಅಂದರೆ ಗ್ರಾಮೀಣ ಪರಿಸರ ಎನ್ನುವುದು ಮೊದಲು ಜಮೀನ್ದಾರಿಕೆಯ ಆಡಂಬೊಲ, ಪಾಳೆಗಾರಿಕೆಯ ವ್ಯವಸ್ಥೆ, ಜಾತಿಪದ್ಧತಿ ಮುಂತಾದವುಗಳಿಂದ ಕೂಡಿದಂತಹವುಗಳು ನಿಜ. ಆದರೆ ಗ್ರಾಮಗಳಲ್ಲಿ ಶೋಷಣೆಯಷ್ಟೇ ಎದ್ದುಕಾಣುವಂತಹದ್ದು ಎಂದು ಹೇಳಲು ಸಾಧ್ಯವಾಗುವುದಿಲ್ಲ. ಅದನ್ನೂ ಒಪ್ಪಿ ಅಥವಾ ಅದನ್ನೂ ಮೆಟ್ಟಿ ಬದುಕಿನ ದಟ್ಟತೆಯನ್ನು ಕಟ್ಟುವ ಕಥೆಗಳನ್ನು ಜೀವನ ಮೌಲ್ಯವನ್ನು ಎತ್ತಿಹಿಡಿಯುವ ಕಥೆಗಳನ್ನು ಕಾಣಬಹುದು.

ಪ್ರಸ್ತುತ ಪ್ರಬಂಧ ಸ್ತ್ರೀ ಬದುಕನ್ನು ಕುರಿತ ಗಂಭೀರ ಕಾಳಜಿಯನ್ನು ವ್ಯಕ್ತಪಡಿಸುತ್ತದೆ. ಗಂಭೀರ ಪರಿಸ್ಥಿತಿಯ ಒತ್ತಡ, ಕರಾಳವಾದಂತೆ ಸ್ವತಂತ್ರ ಮನೋಧರ್ಮಕ್ಕೆ ಒದಗುವುದು ಇಂತಹ ತಳಮಳ, ನಿರಾಶೆಗಳ ನೆಲೆಯಿಂದಲೇ ಅನೇಕ ಸ್ತ್ರೀಪಾತ್ರಗಳು ಬಳಲುತ್ತವಾದರೂ ಅವಶ್ಯಕತೆ ಬಿದ್ದಾಗ ಸಿಡಿಯುವ ತಮಗೆ ತಾವೇ ಸ್ವತಂತ್ರ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ-ಜೀವನ ಪ್ರೀತಿಯ ಕಡೆಗೆ ಸಾಗುವ ಪಾತ್ರಗಳೇ ಹೆಚ್ಚು.

ಇನ್ನು ಚಿಕ್ಕಣ್ಣನವರು ತಮ್ಮ ಕಥೆಗಳನ್ನು ಚೇತೋಹಾರಿಯಾದ ಶೈಲಿಯಲ್ಲಿ ಕಟ್ಟಿದ್ದಾರೆ. ಅವರು ಕಥೆಯನ್ನು ಕಟ್ಟಿರುವ ಶೈಲಿ, ನಿರೂಪಿಸುವ ನಿರೂಪಣೆ, ಜೀವಂತ ಪಾತ್ರ ನಿರ್ಮಾಣ ಕೌಶಲ್ಯ, ನೆಲದ ಸಂಸ್ಕೃತಿಯ ಶ್ರೇಷ್ಠತೆಯನ್ನು ಸಹಜವಾಗಿ ಮನಗಾಣಿಸುವಿಕೆ ಮುಂತಾದಂತಹವು ಸ್ತ್ರೀ ಮನೋಭೂಮಿಕೆಗೆ ಹೇಳಿಮಾಡಿಸಿದಂತಿವೆ. ಇಲ್ಲಿನ ಭಾಷೆಯ ಸೊಗಸು

ನಿಬ್ಬೆರಗಾಗಿಸುವಂತಹದ್ದಾಗಿದೆ. ಗ್ರಾಂಥಿಕ ಭಾಷೆ, ಆಡುಭಾಷೆ, ಕೆಳವರ್ಗದವರ ಭಾಷೆ ಮುಂತಾದವು ನಿರೂಪಣಾ ಶೈಲಿಯಲ್ಲಿ ಕಥೆಗಳ ಒಡಲಿಗೆ ಜೀವ ತುಂಬುವ ಕೆಲಸವನ್ನು ಮಾಡುತ್ತವೆ. ಭಾಷೆಯ ಬಳಕೆಯೂ ಸಹ ಬಂಡಾಯದ ನೆಲೆಯೇ ಆಗಿದೆ. ವ್ಯಕ್ತಿ ಮತ್ತು ಸಮಾಜಕ್ಕೆ ಸಂಬಂಧಿಸಿದಂತೆ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ನೆಲೆಯಲ್ಲಿ ಎಲ್ಲ ಬಗೆಯ ಪಟ್ಟಭದ್ರ ಹಿತಾಸಕ್ತಿಗಳ ವಿರುದ್ಧ ಭಾಷೆಯ ಸಂವಿಧಾನದ ನೆಲೆಯಲ್ಲಾಗುವ ಪ್ರತಿಭಟನೆಯೂ ಸಹ ಈ ಪ್ರಬಂಧದ ಪರಿಣಾಮಗಳಲ್ಲಿ ಒಂದು.

ಪ್ರಸ್ತುತ ಪ್ರಬಂಧ ವ್ಯಕ್ತಿನಿಷ್ಠ ಅಭಿವ್ಯಕ್ತಿ ಕ್ರಮವನ್ನು ಬಿಂಬಿಸುವಂಥದ್ದು. ಚಿಕ್ಕಣ್ಣನವರ ಅನೇಕ ಕಥೆಗಳಲ್ಲಿನ ಅತ್ಯಂತ ವೈಯಕ್ತಿಕವಾದ ಅನುಭವಗಳೂ ಕೂಡ ಸಾಮಾನ್ಯೀಕರಣಗೊಂಡು ಒಟ್ಟು ಮನುಷ್ಯ ಸ್ವಭಾವದ ಶೋಧನೆಯ ಸಾಧನೆಯಾಗುವುದು ವಿಶೇಷತೆ.

ಲೇಖಕನೊಬ್ಬನ ಪ್ರಪಂಚ ಜ್ಞಾನ ಮಾನವ ಸ್ವಭಾವವನ್ನು ವಿವರಿಸುವಲ್ಲಿ ಎದ್ದು ಕಾಣುವಂತಹದ್ದು. ಗ್ರಾಮೀಣ ಜನರ ಬಾಳುವೆಯನ್ನು ಬೇರೆಯವರಿಂದ ಕೇಳಿ ಕಟ್ಟಿಕೊಡುವುದಕ್ಕಿಂತ ತಾವೇ ನೋಡಿ, ಅನುಭವಿಸಿ ಕಟ್ಟಿಕೊಡುವಂತಹ ಅಭಿವ್ಯಕ್ತಿಯೇ ಶ್ರೇಷ್ಠ ಅದೇ ಸಹೃದಯನ ಹಿರಿಮೆ. ಅಂತಹ ಸಹೃದಯಿ ಕಾ.ತ. ಚಿಕ್ಕಣ್ಣ. ಇವರ ಕಥೆಗಳ ಭಾಷೆಯ ಸೊಗಸು, ಕಾವ್ಯಮಯತೆ, ಪ್ರಕೃತಿ ಚಿತ್ರಣ, ಸಾಮಾಜಿಕ ಪ್ರಜ್ಞೆ, ಜೀವನ ದರ್ಶನ ಎಲ್ಲವೂ ಸ್ತ್ರೀ ಸಂವೇದನೆಗೆ ಪೂರಕವಾಗೇ ಇರುವುದನ್ನು ಕಾಣಬಹುದು.

ಚಿಕ್ಕಣ್ಣನವರ ಕಥೆಗಳ ನಿರೂಪಣೆಯಲ್ಲಿ ಬಳಕೆಯಾಗುವ ಹಲವಾರು ಶೈಲಿಗಳ ಮಿಶ್ರಣ, ವಿಡಂಬನೆ, ಆತ್ಮಾವಲೋಕನ, ಭಾವಗೀತಾತ್ಮಕ ಉತ್ಕಟತೆ, ನಾಟಕೀಯತೆ ಇಂಥ ವಿವಿಧ ಧ್ವನಿಗಳ ಪ್ರಯೋಗಗಳನ್ನು ಕಥೆಯನ್ನು ಸೂಕ್ಷ್ಮವಾಗಿ ಗಮನಿಸುವುದರ ಮುಖಾಂತರ ತಿಳಿಯಬಹುದು.

ಚಿಕ್ಕಣ್ಣನವರ ಕಥನ ಕ್ರಿಯೆಗೆ ಕಾವ್ಯ ಗುಣವಿದೆ. ಭಾಷಿಕ ಸಂಕತನದಲ್ಲಿ ಈ ಕಾವ್ಯಗುಣ ಬಹಳ ಪ್ರಮುಖವಾದ ಅಂಶ. ಕಾವ್ಯದ ಕಾವಿಲ್ಲದೆ ಮನುಷ್ಯನ ದ್ವಂದ್ವ ಪ್ರವೃತ್ತಿಯನ್ನು ಬೆಸೆಯಲು ಸಾಧ್ಯವಿಲ್ಲ. ಆದರೆ ಕಾವ್ಯಕ್ಕೆ ಇಲ್ಲದ ಸ್ವಚ್ಛಂದ ಗದ್ಯಕ್ಕೆ ಇರುವುದರಿಂದ ಹೆಚ್ಚು ವಿಸ್ತಾರವುಳ್ಳ ಸಂವೇದನೆಗಳನ್ನು ಕಥೆಯ ಕ್ರಿಯೆಯಲ್ಲಿ ತರಲು ಸಾಧ್ಯವಾಗುತ್ತದೆ. ಹಾಗಾಗಿಯೇ ಚಿಕ್ಕಣ್ಣನವರ ಕಥನ ಕ್ರಿಯೆಗೆ ಮಹತ್ವ ಬಂದಿರುವುದು ಅಂತಹ ಕಾವ್ಯ ಗುಣದಿಂದಲೇ. ಕಥನ ಶಿಲ್ಪ, ಸಂಯಮ, ಸಂಕ್ಷಿಪ್ತತೆ ಮಾನವೀಯ ಸಂಬಂಧಗಳ ನಿಷ್ಕರ್ಷೆಯಲ್ಲಿ ಚಿಕ್ಕಣ್ಣನವರ ಕಥೆಗಳು ಸಮರ್ಥವಾದ ಅಭಿವ್ಯಕ್ತಿಯನ್ನು ಸಾಧಿಸಿವೆ ಎನ್ನಬಹುದು.

ಪ್ರಸ್ತುತ ಪ್ರಬಂಧ ಚಿಕ್ಕಣ್ಣನವರ ಕಥೆಗಳಲ್ಲಿನ ಗಂಡು-ಹೆಣ್ಣಿನ ಸಂಬಂಧವನ್ನು ಕುರಿತ ಸೂಕ್ಷ್ಮವಾಗಿ ಚರ್ಚಿಸುತ್ತದೆ. ಗಂಡು-ಹೆಣ್ಣಿನ ಸಂಬಂಧ ಸಾಂಪ್ರದಾಯಕವಾಗಿರದೆ ಬೇರೊಂದು ಸ್ವರೂಪದಲ್ಲಿ ನೋಡುವ ಕ್ರಮವನ್ನು ತೋರಿಸುತ್ತದೆ. ಹೆಣ್ಣನ್ನು ಸಖಿಯನ್ನಾಗಿ ನೋಡುವುದು ಆಧುನಿಕ ಚಿಂತನೆ. ಬೇಂದ್ರೆಯವರ ಗಂಡು-ಹೆಣ್ಣಿನ ಸಂಬಂಧವನ್ನು ಬಡವ-ಬಲ್ಲಿದರ ಸಂಬಂಧದಂತೆ ಬಳಸುವ ಹಾಗೆ ಚಿಕ್ಕಣ್ಣನವರೂ ಬಳಸುತ್ತಾರೆ. ಇಲ್ಲಿನ ಹೆಣ್ಣು ಯಾವ ಗಂಡಿಗೂ ಕಡಿಮೆಯಿಲ್ಲ. ಚಿಕ್ಕಣ್ಣನವರ ಕಥೆಗಳಲ್ಲಿ ಬಹುಪಾಲು ಕಥೆಗಳು ಗಂಡಿಗಿಂತ ಹೆಣ್ಣೇ ಗಟ್ಟಿ ಎಂಬುದನ್ನು ಸಾರುವಂತಿವೆ.

ಚಿಕ್ಕಣ್ಣನವರ ಸ್ತ್ರೀಕೇಂದ್ರಿತ ಕಥೆಗಳಲ್ಲಿ ಹೆಣ್ಣನ್ನು ಕುರಿತಂತೆ ದೇವತೆಯ ಅಥವಾ ಕಲಟೆ ಎಂದೋ ತೋರಿಸುವ ಚಿತ್ರಣ ಕಂಡು ಬರುವುದಿಲ್ಲ. ವಿವಾಹ ಪೂರ್ವದ ಪ್ರಣಯ, ವಿವಾಹ ನಂತರದ ಪ್ರಣಯ ಯಾವುದೇ ಆದರೂ ಕಥಾನಾಯಕಿಯರ ಪ್ರಬುದ್ಧತೆ, ಘನತೆ ಎದ್ದು ಕಾಣುತ್ತದೆ. ಸ್ತ್ರೀವಾದದ ಯಾವ ಸಿದ್ಧಾಂತವನ್ನೂ ವಾಚ್ಯವಾಗಿ ವವರಿಸದೆ ತಮ್ಮ ಕಥಾನಾಯಕಿಯರು ಬದುಕುವ ಕ್ರಮದಿಂದಲೇ ಒಂದು ಕಾಣ್ಕೆಯನ್ನು ಕೊಟ್ಟುಬಿಡುತ್ತಾರೆ. ಬದುಕುವ ಕ್ರಮ ಪ್ರಗತಿಪರತೆಯಿಂದ ಕೂಡಿರುತ್ತದೆ. ಅದು ಕೃತಕವಲ್ಲ, ಮೇಲಿಂದ ಹೇರಿದ್ದು ಅಲ್ಲದ್ದು.

ಕಂಡೇರಿಯ ಕಥೆಗಳಲ್ಲಿ ಕಾಣುವುದು ನಿಸ್ಸಂಕೋಚದ ಅಭಿವ್ಯಕ್ತಿ. ಕಾಮ ಸಂಬಂಧಿ ಪ್ರತಿಮೆಗಳಾಗಲೀ, ಹೆಣ್ಣಿನ ದೇಹ ವರ್ಣನೆಯಾಗಲೀ, ಬಯ್ಗುಳಗಳಾಗಲೀ ಯಾವುದನ್ನೂ ಲೇಖಕ ಹಿಡಿದು ಹೇಳಿಲ್ಲವೆನ್ನಬಹುದು. ಹಾಗಾಗಿಯೇ ಇಲ್ಲಿನ ಕಥೆಗಳು ಅನನ್ಯತೆಯನ್ನು ಪಡೆದಿವೆ.

ಭಾರತೀಯ ಮಹಿಳೆಯ ಆದರ್ಶ ಜೀವನ ಸಾಧಾರಣ ಮನುಷ್ಯರಿಗೆ ಬಹು ಕಷ್ಟಕರ. ಒಂದು ಜನಾಂಗದಲ್ಲಿ ಅಸಾಧಾರಣರು ಕೆಲವರೇ ಇರುವುದರಿಂದ ಅವರಿಗಾಗಿ ಸೃಜಿಸಿದ ಆದರ್ಶಗಳಿಂದ ಜನಸಾಮಾನ್ಯರಿಗೆ ಯಾವ ಪ್ರಯೋಜನವೂ ಆಗುವುದಿಲ್ಲ. ಯಾರಿಗೆ ಅನ್ಯಾಯವಾಗಿದೆಯೋ, ಯಾರ ಜೀವನ ದುರ್ಭರವಾಗಿದೆಯೋ, ಅವರಿಂದ ಮಾರ್ಪಾಡಿನ ಸಾಧನೆ ನಡೆಯಬೇಕು. ಸಿರಿವಂತಿಗೆಯ ಸುಪ್ಪತ್ತಿಗೆಯಲ್ಲಿರುವವರಿಗೆ ಸೌಮ್ಯ, ಸಮಾಧಾನ, ಸುಸಂಸ್ಕೃತ ನಡತೆ ಇವುಗಳು ಸುಲಭ ಅಥವಾ ಬೇಸಾಯದ ನಿತ್ಯ ಕಾರ್ಯಕ್ರಮದಲ್ಲಿ ಮಗ್ನರಾಗಿರುವವರಿಗೆ ಹೊರ ಪ್ರಪಂಚದ ಗಾಳಿ ತಟ್ಟಿ ಅತೃಪ್ತಿ ಹುಟ್ಟುವುದೂ ಅಪರೂಪ. ಆದ್ದರಿಂದ ಶ್ರೀಮಂತಿಕೆಯಲ್ಲಿ ಹಳ್ಳಿಗಳಲ್ಲಿಯೂ ಇನ್ನೂ ಮೆದುತನವೇ ಮೂರ್ತಿವೆತ್ತಂಥ ಹೆಣ್ಣು

ಮಕ್ಕಳನ್ನು ಕಾಣುತ್ತೇವೆ. ಪರಿಸ್ಥಿತಿ ಒರಟಾದಾಗ ಯಂತ್ರಯುಗದ ಎಳೆದಾಟಗಳಿಗೆ ಪರಿಹಾರಗಳನ್ನು ಹೊಂದಿಸುವುದು ಕಷ್ಟ. ಇಂತಹದಕ್ಕೆ ಎದೆಯೊಡ್ಡಿ ಶತಶತಮಾನಗಳ ಸಂಕೋಲೆಯನ್ನು ಕಿತ್ತೊಗೆದು, ಸಾಂಸ್ಕೃತಿಕವಾಗಿ ಆದರ್ಶಮಯಿಯಾಗುವುದು ಮನುಷ್ಯತ್ವದ ನೈಜತೆಗೆ ಹತ್ತಿರವಾಗುವಂತಹ ಸಂಗತಿ. ಅಂತಹ ವ್ಯಕ್ತಿತ್ವ ಗೀತ, ಶಾರದ, ಸಣ್ಣಿಂಗಿ, ಸತ್ಯವತಿ ಪಾತ್ರಗಳ ಮೂಲಕ ಮೂಡಿಬಂದಿರುವುದನ್ನು ಕಾಣಬಹುದು.

ನಮ್ಮ ಹೆಂಗಸರ ಎಲ್ಲಾ ಸಮಸ್ಯೆಗಳು, ತೀರಬಾರದ ಕಷ್ಟಗಳು ಉಂಟಾಗಿರುವುದು ಸಂಸ್ಕೃತಿಯಲ್ಲೇ ಹುಟ್ಟಿಬಂದಿರುವ ಕೆಲವು ಪೌರಾಣಿಕ ಮೌಲ್ಯಗಳಿಂದ, ಆದರ್ಶಗಳಿಂದ. ವೀರೋನ್ನತ ಸಮಾಜದಲ್ಲಿ ಇತಿಹಾಸದ ಬೆಳಕಿನಲ್ಲಿ ರೂಪಿತವಾದ ಈ ಕೆಲವು ನಿಬಂಧನೆಗಳು, ಸಾವಿರಾರು ವರ್ಷಗಳ ಅನಂತರ ಪೂರ್ತಿ ಬದಲಾದ ಇಂದಿನ ಪ್ರಪಂಚದಲ್ಲೂ ನಮ್ಮ ಮೊದಲಿನ ಪ್ರಾಬಲ್ಯ ಅಭೇದ್ಯತೆಯನ್ನು ಹೊಂದಿ ನಮ್ಮ ಜನಸಂಖ್ಯೆಯ ಅರ್ಧಭಾಗವಾದ ಮಹಿಳೆಯರನ್ನು ಅತಂತ್ರರನ್ನಾಗಿ ಮಾಡಿದೆ. ಇಂತಹ ಅತಂತ್ರ ಸ್ಥಿತಿಯಲ್ಲಿಯೂ ಜೀವನ ಪ್ರಗತಿಯನ್ನು ಮೆರೆಯುವ ಪಾತ್ರಗಳನ್ನು ಚಿಕ್ಕಣ್ಣನವರ ಕಥೆಗಳಲ್ಲಿ ಕಾಣಬಹುದು.

ಎಷ್ಟೇ ರೀತಿಯ ಸಂಸ್ಕೃತಿ ಜನ್ಯವಾದ ಅಧಿಕಾರವನ್ನು ಪ್ರಕೃತಿ ವಿರೋಧಿಸಿ ಬೇರೆಯದೇ ಆದ ಅಷ್ಟೇ ಸತ್ಯದ ತೀರ್ಪನ್ನು ನೀಡುತ್ತದೆ ಪ್ರಕೃತಿಯ ಮುಂದೆ ಸಂಸ್ಕೃತಿ ಕಟ್ಟಿಕೊಂಡ ಕಟ್ಟಡಗಳು ಕುಸಿದು ಹೋಗುತ್ತವೆ ಎಂಬುದನ್ನು ನಿಶ್ಚಯ, ಒಡಲುರಿ ಕಥೆಗಳು ಎತ್ತಿ ತೋರಿಸುತ್ತವೆ. ಮತ್ತೊಂದು ಎದ್ದುಕಾಣುವ ವೈಶಿಷ್ಟ್ಯವೆಂದರೆ ಅವುಗಳ ಸ್ತ್ರೀಕೇಂದ್ರಿತ ಅನುಭವ ಹಾಗೂ ದೃಷ್ಟಿಕೋನ. ಸ್ತ್ರೀಯರ ಅತೃಪ್ತ ಆಸೆಗಳು, ಶೋಷಣೆ, ಏಕಾಕಿತನ, ಸ್ವಾತಂತ್ರ್ಯದ ಹಂಬಲ, ಮಹತ್ವಾಕ್ಷಾಂಕ್ಷೆ, ಯಾತನೆ–ಇವೆಲ್ಲವನ್ನೂ ಒಳಗೊಂಡ ಗ್ರಾಮದ ಹಾಗೂ ನಗರದ ಬದುಕು ಚಿಕ್ಕಣ್ಣನವರ ಬಹುಪಾಲು ಕಥೆಗಳಿಗೆ ವಸ್ತುವನ್ನೊದಗಿಸುತ್ತದೆ.

ಚಿಕ್ಕಣ್ಣನವರ ಕಥೆಗಳನ್ನು ಗಮನಿಸಿದಾಗ ಕತೆಗಾರರು ಪ್ರಭುತ್ವದ ಮೂಲಗಳಾದ ಜನಾಂಗ, ಜಾತಿ, ವರ್ಣ, ಪಂಥ, ಪಂಗಡ ಅಥವಾ ಸಿದ್ಧಾಂತಗಳ ಬೆನ್ನು ಹತ್ತಿ ಹೋಗುವುದಿಲ್ಲ. ಚಲಿಸುವ ಜೀವಿ ಜೀವನವನ್ನು ಕುರಿತು ಅರಿಯುತ್ತಾರೆ ಮತ್ತು ಅಳೆಯುತ್ತಾರೆ. ಹಾಗಾಗಿಯೇ ಚಿಕ್ಕಣ್ಣನವರ ಕಥೆಗಳು ವಿಶೇಷವಾಗಿ ಕಾಣಿಸುತ್ತವೆ.

ಚಿಕ್ಕಣ್ಣನವರು ಯಾವುದನ್ನೂ ಘನವಾಗಿ ಭಾವಿಸುವುದಿಲ್ಲ; ತೋರವಾಗಿ ತಿಳಿಯುವುದಿಲ್ಲ. ಯಾಕೆಂದರೆ ಅವರು ನಾಗರೀಕತೆಯೊಳಕ್ಕೆ ನುಗ್ಗುವುದಿಲ್ಲ. ಅದರೊಡನೆ ಜಗ್ಗಾಟ ಆಡುವುದಿಲ್ಲ.

ನಿಜದ ಬದುಕು ನಾಗರೀಕವೂ ಅಲ್ಲ ಗ್ರಾಮೀಣವೂ ಅಲ್ಲ ಪ್ರಕೃತಿಯನ್ನು ಸಂಸ್ಕೃತಿಯಾಗಿ ಅನುಭವಿಸಿ ಸಂಗ್ರಮಿಸುವಿಕೆ ಎನ್ನಬಹುದು.

ಚಿಕ್ಕಣ್ಣನವರ ಕೆಲವು ಕತೆಗಳಲ್ಲಿ ಕಾಣುವ ಒಂದು ಗಮನಾರ್ಹ ಅಂಶವೆಂದರೆ ವ್ಯಂಗ್ಯ. 'ಗೆದ್ದಲು ಕಟ್ಟಿದ ಗೂಡು' 'ಕೊಂಡಿಮುಳ್ಳುಗಳು' ಕಾಲಾಯಗಳಲ್ಲಿ ದೇವರ ಪೂಜೆ, ಪುರಾಣ, ಅನ್ನ ಸಂತರ್ಪಣೆ ಸಂಸ್ಕೃತಿಯನ್ನು ಕುರಿತ ಭಾಷಣಗಳ ನಡುವೆ ಇಲ್ಲಿ ಬಳಸಿರುವ ವ್ಯಂಗ್ಯ ಅರ್ಥಪೂರ್ಣವಾಗಿದೆ.

ಪ್ರಸ್ತುತ ಅಧ್ಯಯನವನ್ನು ಸ್ತ್ರೀವಾದದ ಹಿನ್ನೆಲೆಯಲ್ಲಿ ಚರ್ಚಿಸುವಾಗ ಚಿಕ್ಕಣ್ಣನವರ ಕಥೆಯ ವಸ್ತು, ಕಾಳಜಿ, ಭಾಷೆಯ ಸೊಗಸು, ಕಾವ್ಯಮಯತೆ, ಪ್ರಕೃತಿ ಚಿತ್ರಣ, ಸಾಮಾಜಿಕ ಪ್ರಜ್ಞೆ, ಜೀವನ ದರ್ಶನ ಎಲ್ಲವೂ ಸ್ತ್ರೀಸಂವೇದನೆಗೆ ಪೂರಕವಾಗಿಯೇ ಇರುವುದನ್ನು ಆದಷ್ಟು ಸರಳವಾಗಿ ವಿವೇಚಿಸಿ ವಿವರಿಸುವ ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಹೆಣ್ಣಿನ ಆಸೆ, ಬಯಕೆ, ಆಶಯಗಳು, ಸಮಸ್ಯೆಗಳು ಬದುಕನ್ನು ಎದುರಿಸುವ ಎದೆಗಾರಿಕೆ ಮತ್ತು ಪುರುಷ ಸಮಾಜದ ಸಮಸ್ಯೆಗಳು ಬದುಕನ್ನು ಎದುರಿಸುವ ಎದೆಗಾರಿಕೆ ಮತ್ತು ಪುರುಷ ಸಮಾಜದ ಶೋಷಣೆ ಎಲ್ಲವನ್ನೂ ಪ್ರತಿಬಿಂಬಿಸುವಂತಹ ಪಾತ್ರಗಳನ್ನು ವಿವೇಚಿಸಲಾಗಿದೆ.

ನಮ್ಮ ದೇಶದ ನಾಗರೀಕತೆ, ಸಂಸ್ಕೃತಿಗಳೆಂಬ ಈ ಸಂದಿಗ್ಧ ಕಾಲದಲ್ಲಿ ಯುಗಯುಗಾಂತರದ ಚಿಪ್ಪಿನಿಂದ ಹೊರಬರುತ್ತಿರುವ ಮಹಿಳೆಯರ ಮುಂದಿರುವ ಕೆಲಸ ಬಹಳ ಕಷ್ಟಕರವಾದದ್ದು. ಭಾವನೆಗಳ ಮಟ್ಟದಲ್ಲಿ ಇನ್ನೂ ಪೂರ್ಣ ಭಾರತೀಯರಾಗಿ, ವಿಚಾರಗಳಲ್ಲಿ ಮಾತ್ರ ಅಂತರರಾಷ್ಟ್ರೀಯ ಮಟ್ಟದ ಪ್ರಜೆಗಳಾಗಿರುವ ಮಹಿಳೆಯರಿಗೆ ಮನಸ್ಸಿನಲ್ಲಿ ತುಮುಲ, ಸಂಘರ್ಷಗಳು ಕಟ್ಟಿದ್ದವು. ಇದರಿಂದ ಬಿಡುಗಡೆ ಈಗಲೇ ಸಾಧ್ಯವಿಲ್ಲ. ಇನ್ನೂ ಐವತ್ತು ವರ್ಷಗಳು ಮುಗಿದರೂ ಈ ಜಂಜಾಟ ಮುಗಿಯುವುದಿಲ್ಲ. ಬಹುಶಃ ಯಾವುದಾದರೂ ಬಹುದೊಡ್ಡ ರಾಜಕೀಯ ಬದಲಾವಣೆಯಿಂದ ಹೆಂಗಸರ ಸಮಾನತೆಯ ಹೋರಾಟ ಸುಗಮವಾಗಬಹುದು. ಪ್ರತಿಯೊಬ್ಬ ಪ್ರಜೆಯೂ ದೇಶದ ಪ್ರಗತಿಯ ನೇಗಿಲಿಗೆ ಹೆಗಲು ಕೊಡಬೇಕಾದಾಗ ಬಹುಶಃ ಹೆಣ್ಣು-ಗಂಡು ಎಂಬ ವ್ಯತ್ಯಾಸ ತಾನಾಗಿ ಹರಿದು ಹೋಗಬಹುದು.

ಹೆಣ್ಣಿನ ಬದುಕಿನಲ್ಲಿ ವಿವಾಹ ಎನ್ನುವುದು ಮಹತ್ತರ ಬದಲಾವಣೆಗಳನ್ನು ತರುವ ಘಟನೆ ಎನ್ನಬಹುದು. ಹೆಣ್ಣಿನ ಆಸೆ, ಆಕಾಂಕ್ಷೆಗಳು, ಕಲಿಕೆ, ಸಾಮರ್ಥ್ಯಗಳು ಸೃಜನಶೀಲತೆಯ ಅಳಿವು ಉಳಿವುಗಳು ಬಹಳಷ್ಟು ಬಾರಿ ವಿವಾಹವನ್ನು ಅವಲಂಬಿಸಿರುತ್ತದೆ. ಗಂಡಿನ ಪಾಲಿಗೆ ಇದು ಹಾಗಾಗಬೇಕೆಂದೇನೂ ಇಲ್ಲ. ಬಯಸಲಿ ಬಯಸದಿರಲಿ ವಿವಾಹ ಹೆಣ್ಣಿನ ಪಾಲಿಗೆ ಬಂಧನವಾಗಿಯೇ ಪರಿಣಮಿಸುತ್ತದೆ.

ವೈವಾಹಿಕ ಸಮಸ್ಯೆಗಳನ್ನು ನಿವಾರಿಸಿಕೊಳ್ಳಲು ಎಷ್ಟೇ ಕಾನೂನುಗಳು ಬಂದರೂ, ಒಟ್ಟಾರೆಯಾಗಿ ಸಮಾಜದಲ್ಲಿ ವಿವಾಹವನ್ನು ಕುರಿತಾದ ಪರಿಕಲ್ಪನೆ ಬದಲಾಗದಿದ್ದರೆ ಸಮಸ್ಯೆಗಳು ಸಂಪೂರ್ಣವಾಗಿ ಇಲ್ಲದಂತಾಗುವುದಿಲ್ಲ. ಆದ್ದರಿಂದ ಯಾವುದೇ ಸಮಾಜದಲ್ಲಿನ ವಿವಾಹದ ಚೌಕಟ್ಟು, ಮಹಿಳೆಯರ ಸ್ಥಾನಮಾನದ ಸ್ವರೂಪ ಧೋರಣೆಗಳನ್ನು ರೂಪಿಸುವ ನಿರ್ಣಾಯಕ ಅಂಶವಾಗಿದೆ. ಬರ್ಟ್ರೆಂಡ್ ರಸೆಲ್ ಹೇಳುವಂತೆ "ಒಳ್ಳೆಯ ವಿವಾಹದ ಜೀವಾಳ ಇರುವುದು ಪರಸ್ಪರ ವ್ಯಕ್ತಿಗಳಿಗೆ ನೀಡುವ ಗೌರವದಲ್ಲಿ. ಇಬ್ಬರ ನಡುವಿರುವ ಆಳವಾದ ದೈಹಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ವ್ಯಕ್ತಿತ್ವಗಳು ಸಮ್ಮಿಳಿತಗೊಂಡು ಸ್ತ್ರೀ ಪುರುಷರ ನಡುವಣ ಪ್ರೀತಿಯು ಹೆಚ್ಚು ಫಲಕಾರಿಯಾಗಲು ಅಪಾರವಾದ ತ್ಯಾಗದ ಮನೋಭಾವ ಅವಶ್ಯವಾಗುತ್ತದೆ. ಇಂತಹ ತ್ಯಾಗವು ಸ್ವಯಂ ಇಚ್ಛೆಯಿಂದ ಕೂಡಿರದಿದ್ದರೆ ಅದು ಪ್ರೀತಿಯ ಅಸ್ತಿಭಾರವನ್ನೇ ನಾಶ ಮಾಡಿಬಿಡುತ್ತದೆ".

ಒಟ್ಟಾರೆಯಾಗಿ ಹೆಣ್ಣು ವೃದ್ಧೆ, ಯುವತಿ, ನಗರ, ಗ್ರಾಮದ ಮಹಿಳೆಯರೇ ಆಗಿರಲಿ ಅವಳಿಗೆ ತೃಪ್ತಿ ಅನ್ನುವುದು ಹುಡುಕಾಟವೇ ಆಗಿದೆ. ಅವಳು ಪುರುಷ ಪ್ರಧಾನ ವ್ಯವಸ್ಥೆಯ ಶೋಷಣೆಗೆ ಗುರಿಯಾಗಿರುವಂತದ್ದು ತೀರ ಸಹಜವಾಗಿಬಿಟ್ಟಿದೆ. ಹೆಣ್ಣಿನ ಆರ್ಥಿಕ, ಸಾಮಾಜಿಕ ಮತ್ತು ಲೈಂಗಿಕ ಸಮಾನತೆಯ ಹೋರಾಟ ಅನೇಕ ಕೃತಿಗಳ ವಸ್ತುವಾಗಿವೆ. ಹೆಣ್ಣನ್ನು ಕುರಿತು ಚಿಂತಿಸುವ ಸಾಧ್ಯತೆಯ ಕ್ರಾಂತಿಕಾರಿ ಬದಲಾವಣೆ ಎಷ್ಟೇ ತೀವ್ರವಾಗಿದ್ದರೂ ಸನಾತನ ಹಿಂದೂ ಧರ್ಮದ ಲಕ್ಷ್ಮಣ ಗೆರೆಯನ್ನು ಮಾತ್ರ ಹೆಣ್ಣು ಎಂದೂ ದಾಟುವಂತಿಲ್ಲ.

ಆಧುನಿಕ ಯುಗದಲ್ಲಿ ನಾಗಾಲೋಟದಲ್ಲಿ ಸಾಗುತ್ತಿರುವ ನಾವುಗಳು ಮಾನವೀಯತೆಯ ಬಗ್ಗೆ ಚಿಂತಿಸುವ ಅನಿವಾರ್ಯತೆ ಇದೆ. ಹಾಗಾಗಿ "ಕಾ.ತ. ಚಿಕ್ಕಣ್ಣನವರ ಕಥೆಗಳಲ್ಲಿನ ಸ್ತ್ರೀ ಪಾತ್ರ ಚಿತ್ರಣ" ಪ್ರಬಂಧವು ಮಾನವೀಯತೆಯನ್ನು ಗುರ್ತಿಸುವ ಪುಟ್ಟ ಪ್ರಯತ್ನ ಹಾಗೂ ಹೆಣ್ಣಿನ ಬದುಕು, ಅವಳ ಕನಸುಗಳು, ನೋವು, ನಿರಾಶೆಗಳು, ಅವಳಿಗಿರುವ ಅಧಮ್ಯ ಉತ್ಸಾಹ, ಛಲ, ಜೀವನ ಪ್ರೀತಿ ಎಲ್ಲವನ್ನೂ ವ್ಯಾಖ್ಯಾನಿಸುವ ಪ್ರಾಮಾಣಿಕ ಪ್ರಯತ್ನ ಇಲ್ಲಿದೆ.

ಒಟ್ಟಾರೆ ಯಾವ ವರ್ಗದ ಮಹಿಳೆಯರೇ ಆಗಲೀ ಅವರಿಗೆ ತೃಪ್ತಿ ಅನ್ನೋದು ಹುಡುಕಾಟವೇ ಆಗಿರುವುದನ್ನು ಇಡೀ ಕಥೆಗಳನ್ನು ಗಮನಿಸಿದಾಗ ತಿಳಿಯುತ್ತದೆ. ಆಧುನಿಕ ಯುಗದಲ್ಲಿ ನಾಗಾಲೋಟದಲ್ಲಿ ಸಾಗುತ್ತಿರುವ ನಾವುಗಳು ಮಾನವೀಯತೆಯ ಕಡೆಗೆ ಚಿಂತಿಸುವುದು ಅಗತ್ಯವಿದೆ. ಹಾಗಾಗಿ ಪ್ರಸ್ತುತ ಪ್ರಬಂಧ "ಕಾ.ತ. ಚಿಕ್ಕಣ್ಣನವರ ಕಥೆಗಳಲ್ಲಿನ ಸ್ತ್ರೀಪಾತ್ರ ಚಿತ್ರಣ" ಎಂಬುದು ಮಾನವೀಯತೆಯನ್ನು ಗುರುತಿಸುವ ಪುಟ್ಟ ಪ್ರಯತ್ನ.

## ಪರಾಮರ್ಶನ ಗ್ರಂಥಗಳು


| | | | |
|---|---|---|---|
| ೧. | ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ | : | ವಿವಿಧ ಲೇಖಕರು, ಕರ್ನಾಟಕ ಸಾಹಿತ್ಯ ಅಕಾಡೆಮಿ. ೨೦೦೬ |
| ೨. | ಬೈದವ್ವ ಕೇಳಾ ನನ ಮಾತ | : | ಡಾ. ಬಿ. ಮಂಗಳಾ ಪ್ರಿಯದರ್ಶಿನಿ, ಸಚ್ಚಿನ್ ಪಬ್ಲಿಕೇಷನ್. ೨೦೦೭ |
| ೩. | ಸ್ತ್ರೀವಾದ ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ | : | ಡಾ. ಬಿ. ಮಂಗಳಾ ಪ್ರಿಯದರ್ಶಿನಿ, ಸಚ್ಚಿನ್ ಪಬ್ಲಿಕೇಷನ್. |
| ೪. | ಸುವರ್ಣ ಸಾಹಿತ್ಯ ವಿಮರ್ಶೆ | : | ಹೆಚ್. ದಂಡಪ್ಪ, ಬಿ.ಎನ್. ಸುಮಿತ್ರಾಬಾಯಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ,೨೦೦೬ |
| ೫. | ಕುವೆಂಪು ಕಾದಂಬರಿಗಳು | : | ಡಾ. ಗುರುಪಾದ ಮರಿಗುಡ್ಡಿ, ಲಕ್ಷ್ಮಿ ಮುದ್ರಣಾಲಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು. ೨೦೦೦. |
| ೬. | ಸ್ತ್ರೀವಾದ, | : | ಡಾ. ಬಿ.ಎನ್. ಸುಮಿತ್ರಬಾಯಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು. ೧೯೯೯. |
| ೭. | ಸ್ತ್ರೀ ಸಂವೇದನೆ | : | ಡಾ. ಬಿ.ಎನ್. ಸುಮಿತ್ರಬಾಯಿ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ. |
| ೮. | ಶತಮಾನದ ಸಣ್ಣ ಕಥೆಗಳು | : | ಎಸ್. ದಿವಾಕರ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು. |
| ೯. | ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ | : | ಎಲ್.ಜಿ. ಮೀರಾ, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು. ೨೦೦೪. |
| ೧೦. | ಅವಳ ಕಥೆಗಳು | : | ಡಾ. ಜಿ.ಎಸ್. ಆಮೋರ, ಪ್ರಿಸಂ. ಕಥಾ ಮಾಲಿಕೆ, ಜಯನಗರ, ಬೆಂಗಳೂರು. ೧೯೯೯ |
| ೧೧. | ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ | : | ಡಾ. ಬಿ.ಎನ್. ಸುಮಿತ್ರಬಾಯಿ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ. |

೧೨. ಪಶ್ಚಿಮದ ಸ್ತ್ರೀವಾದಿ ವಿಮರ್ಶಾ ಪಂಥಗಳು : ಡಾ. ಬಿ.ಎನ್. ಸುಮಿತ್ರಬಾಯಿ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ. ೨೦೦೦

೧೩. ದ ಸೆಕೆಂಡ್ ಸೆಕ್ಸ್ : ಸಿಮೊನ್ ದ ಬೋವಾ (ಅನುವಾದ ಡಾ. ಎಚ್.ಎಸ್. ಶ್ರೀಮತಿ) ಅಧ್ಯಯನ ಮಂಡಲ, ಬೆಂಗಳೂರು. ೨೦೦೭

೧೪. ಮಹಿಳೆ ಬಿಡುಗಡೆಯ ಹಾದಿಯಲ್ಲಿ : ಎನ್. ಗಾಯತ್ರಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು. ೧೯೯೧.

೧೫. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು : ಡಾ. ಪ್ರೀತಿ ಶುಭಚಂದ್ರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ. ೨೦೦೨

೧೬. ಮಹಿಳೆ ಮತ್ತು ಶಿಕ್ಷಣ : ಶಾಲಿನಿ ರಾಮಚಂದ್ರ ಹೆಗಡೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೨೦೦೨.

೧೭. ಇದು ಮಾನಷಿಯ ಓದು : ಮಹೇಶ್ವರಿ ಯು., ಶಿವರಾಮ್‌ಕಾರಂತ ಅಧ್ಯಯನ ಕೇಂದ್ರ, ಪುತ್ತೂರು. ೨೦೦೧.

೧೮. ಮಹಿಳೆ ಮತ್ತು ಕನ್ನಡ ಮತ್ತು ಸಾಹಿತ್ಯ : ಜಿ.ಎಸ್. ಶಿವರುದ್ರಪ್ಪ, ಪ್ರಸಾರಂಗ, ಬೆಂಗಳೂರು ವಿಶ್ವವಿದ್ಯಾಲಯ. ೧೯೭೯.

೧೯. ಸ್ತ್ರೀವಾದ ದಕ್ಷಿಣ ಏಷ್ಯಾದಲ್ಲಿ : ಕಮಲಾ ಭಾಸಿನ್ ನಿಘಾತ ಸೈಯದ್ ಖಾನ್ ಅನುವಾದ: ವೆಂ. ವನಜ, ಹೆಚ್.ಆರ್. ರಾಜೇಶ್ವರಿ, ಸಮತಾ ಪ್ರಗತಿಪರ ಮಹಿಳಾ ವೇದಿಕೆ. ೧೯೮೯.

೨೦. ದಶಕದ ಕನ್ನಡ ಸಾಹಿತ್ಯ : ಡಾ. ಎಫ್.ಟಿ. ಹಳ್ಳೀಕೇರಿ, ಡಾ. ಕೆ. ರವೀಂದ್ರನಾಥ, ಪ್ರಸಾರಾಂಗ, ಹಂಪಿ. ೨೦೦೨.

೨೧. ಕನ್ನಡ ಸಣ್ಣ ಕಥೆಗಳು : ಜಿ.ಎಚ್. ನಾಯಕ್, ಅಂತರ ಭಾರತೀಯ ಪುಸ್ತಕಮಾಲೆ. ೨೦೦೧.

೨೨. ಸಾಹಿತ್ಯ ನೋಟ : ಡಿ. ನಾಗಣ್ಣ, ತಳಗವಾದಿ ಪ್ರಕಾಶನ, ಮೈಸೂರು, ೨೦೦೫

೨೩. ದಂಡೆ : ಕಾ.ತ. ಚಿಕ್ಕಣ್ಣ, ಕಥನ ಪ್ರಕಾಶನ. ೨೦೦೨

೨೪. ಮುಂಜಾವು : ಕಾ.ತ. ಚಿಕ್ಕಣ್ಣ, ಕಥನ ಪ್ರಕಾಶನ.

೨೫. ಮಹಿಳಾ ಚಳುವಳಿಯ ಮಜಲುಗಳು : ಎನ್. ಗಾಯಿತ್ರಿ, ನವಕರ್ನಾಟಕ ಪಬ್ಲಿಕೇಷನ್ಸ್. ೧೯೯೮

೨೬. ಸೊಲ್ಲೆತ್ತಿ : ಡಾ. ಮಲ್ಲಿಕಾಘಂಟಿ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ.

೨೭. ದೇವನೂರು ಮಹದೇವ ಅವರ ಕೃತಿಗಳು : ದೇವನೂರು ಮಹದೇವ, ಪತ್ರಿಕೆಯ ಪ್ರಕಾಶನ, ಬೆಂಗಳೂರು ೧೯೯೨

೨೮. ಕನ್ನಡ ಸಣ್ಣ ಕಥೆಗಳಲ್ಲಿ ದಲಿತ ಸಂಸ್ಕೃತಿ : ಡಾ. ಸಿ.ವಿ. ಹೊನ್ನಯ್ಯ, ಕೆ.ಎಸ್. ಮುತ್ತಪ್ಪ ಸ್ಮಾರಕ ಟ್ರಸ್ಟ್, ಬೆಂಗಳೂರು. ೨೦೦೪.

೨೯. ಹೊತ್ತಿಗೆ : ಗಾಯಿತ್ರಿ ರಾಮಣ್ಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೨೦೦೧.

೩೦. ಕನ್ನಡ ಮಹಾಕಾವ್ಯಗಳಲ್ಲಿ ಸೀತೆಯ ಪಾತ್ರ : ಡಾ. ಮಂದಾಕಿನಿ ಭೀಮಸೇನರಾವ್ ತವಗ, ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು. ೨೦೦೨

೩೧. ಜುಗಾರಿ ಕ್ರಾಸ್ : ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಪುಸ್ತಕ ಪ್ರಕಾಶನ, ಮೈಸೂರು.

೩೨. ಶ್ರೀ ಕುವೆಂಪು ಸ್ತ್ರೀ ವಾದಿ ಚಿಂತನೆ : ಉಷಾ ವಿಜಯ ಮೊಳೆಯಾರ, ಸಿ.ವಿ.ಜಿ. ಪಬ್ಲಿಕೇಷನ್ಸ್. ಬೆಂಗಳೂರು. ೨೦೦೪.

೩೩ ದಂಡೆ ನಾಟಕ ರೂಪ : ಎಸ್.ಜಿ. ಸಿದ್ದರಾಮಯ್ಯ, ಜನ ಸಂಸ್ಕೃತಿ ಉತ್ಸವ

೩೪. ಬೆಸಗರಹಳ್ಳಿ ರಾಮಣ್ಣನವರ ಕಥೆಗಳು : ಬೆಸಗರಹಳ್ಳಿ ರಾಮಣ್ಣ

೩೫. ಚಿದಂಬರ ರಹಸ್ಯ : ಪೂರ್ಣಚಂದ್ರ ತೇಜಸ್ವಿ, ಪುಸ್ತಕ ಪ್ರಕಾಶನ, ಮೈಸೂರು.

೩೬. ದೇವಿ : ಪಿ. ಲಂಕೇಶ್

೩೭. ಕಥೆಯಾದಳು ಹುಡಗಿ : ಯಶವಂತ ಚಿತ್ತಾರ

೩೮. ಸಂವಾದ ಪತ್ರಿಕೆ

